ರ್ಗದರ್ಶಿ ಗ್ರಂಥಮಾಲಿಕಾ ಸಂಖ್ಯೆ ೯.

# ಭರ್ತೃಹರಿ ನಿರ್ವೇದ

(ನಾಟಕ)

ಪರಿವರ್ತಕರು

ೀ ಎಸ್. ಎಚ್. ನರಹರಯ್ಯ, ಬಿ.ಎ., ಎಲ್.ಎಲ್. ಎಮ್.

ಅವರಿಂದ ಪರಿವರ್ತಿತವಾದುದು.



ಮೈಸೂರು

ಶ್ರೀ ಕೃಷ್ಣಾ ಮುದ್ರಾಲಯದಲ್ಲಿ ಮುದ್ರಿತವಾಯಿತು

1924

ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರ.

ಪ್ರಕಾಶಕರೂ, ಪುಸ್ತಕ ವ್ಯಾಪಾರಿಗಳು.

ಮಾಳಮಡ್ಡಿ ಧಾರವಾಡ.



ಬೆಲೆ ೦—೬—೦

ಈ ಸಣ್ಣಗ್ರಂಥವು

ನನ್ನಿಂದ ಹಿಂದೆ ಯಾವಾಗಲೋ ಪರಿವರ್ತಿಸಲ್ಪಟ್ಟಿದ್ದುದಾದರೂ

ಯಾರ ೮೦ ವರ್ಷಗಳ ಜೀವಮಾನವು

" ಅನಾಯಾಸೇನ ಮರಣಂ ವಿನಾದೈನ್ಯೇನ ಜೀವನಮ್ "

ಎಂಬುಕ್ತಿಯನ್ನು ಸಾಕ್ಷಾತ್ಕರಿಸಿತೋ

ಯಾರ ಪುಣ್ಯೋದಯದಿಂದ

" ದೇಹಾನ್ತೇ ತವ ಸಾನ್ನಿಧ್ಯಂ ದೇಹಿ ಮೇ ಪರಮೇಶ್ವರ "

ಎಂಬುದರ ಅರ್ಥವೂ ಅನುಮಿತವಾಗುವದೋ

ಆ ನನಗೆ ಸದಾಧ್ಯೇಯವಾದ

ತಾತಪಾದಕಮಲದಲ್ಲಿ

ಅರ್ಪಿತವಾಗಿರುವುದು.

ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರ,
ಪ್ರಕಾಶಕರೂ, ಪುಸ್ತಕ ವ್ಯಾಪಾರಿಗಳು.
ಮಾಳಮಡ್ಡಿ ಧಾರವಾಡ.

ಶ್ರೀರಸ್ತು.

ಜಯಜಯ ಜಗದೀಶ ಲಕ್ಷ್ಮೀನೃಸಿಂಹ ಭಗವಜ್.

ಕಂ|| ತನುವೃತ್ತಿ ನಿನ್ನತಾರಾ |
ಧನೆ ವಾಗ್ವೃತ್ತಿ ಸ್ತವಂ ಮನೋವೃತ್ತಿ ಪರೇ ||
ಶನೆ ಜಾನಮಕ್ಕೆ ಬೇಡಮ |
ದೆನಗೀಷತ್ಕರ್ಮಬಂಧಮುಂ ಸಂಸೃತಿಯೊಳ್ ||

ಕರ್ಣಾಟಕ

# ಭರ್ತೃಹರಿ ನಿರ್ವೇದನಾಟಕಂ.

## ಪ್ರಥಮಾಂಕಂ.

### ನಾಂದಿ

ವೃತ್ತ|| ಗಂಗಾಸ್ರೋತಂ ಕುಳಿರ್ಗೆಕ್ಕೆನುತೆ ಹಿಮಗುವುಂ ಶೀರ್ಷದೊಲ್ದಾಂತೊಡಂ ಬೆ | ರ್ಚಿಂಗೋತ್ತಾಪಕ್ಕಧಂ ಮಾಣ್ಗುವುಡಿಯಿಡೆ ಜಟಾಜೂಟದಿಂ ನಂಜು ಕೊಲ್ಗುಂ || ನುಂಗಲ್ ಪ್ರಾಣಕ್ಕೆನುತ್ತಳ್ಕುರಿಗದೆರ್ದೆಯನೇ ಸೇರದಾರಿಪ್ಪುದಂತು | ತ್ತುಂಗಂ ಪೆರ್ಚಿರ್ದ ಈ ಗೀಶನ ಸತಿಯ ವಿಯೋಗಾಗ್ನಿಯಂ ಶಾಂತಿಯೊಳ್ಪಂ[illegible]|| *

---

* ಮೂಲಕಾರರು ನಾಂದೀಶ್ಲೋಕದಲ್ಲಿ ೮, ೧೨, ೧೮, ೨೨, ಇಷ್ಟೇ ಪದಗಳಿರಬೇಕೆಂಬ ನಿಯಮವನ್ನು ಇಲ್ಲಿ ಅನುಸರಿಸಿದ ಹಾಗಿಲ್ಲ. ಆದುದರಿಂದ ನಾವೂ ಅನುಸರಿಸಿಲ್ಲ.

ಈಗಲೀಗ ನಾಟಕಗಳನ್ನು ಗದ್ಯರೂಪದಲ್ಲಿಯೇ ರಚಿಸಬೇಕೆಂದು ಅನೇಕ ಮಹಾಶಯರು ಅಭಿಪ್ರಾಯಪಡುವರು. ರಸಕವಿತ್ವಕ್ಕೆ ಪದ್ಯಬಂಧವು ಬರುವಷ್ಟು ಗದ್ಯಬಂಧವು ಬರಲಾರದೆಂದು ಭಾವಿಸುವೆವಾದರೂ ಮಹಾಜನರನ್ನು ಅನುಸರಿಸುವುದೂ ಒಂದು ಮಾರ್ಗವೇ ಆದುದರಿಂದ ಎಲ್ಲಾ ಪದ್ಯಗಳಿಗೂ ಗದ್ಯಾನುವಾದವನ್ನು ರಚಿಸಿ ಪುಟದ ಅಡಿಯಲ್ಲಿ ಸೇರಿಸುವೆವು. ಈ ನಾಂದೀಶ್ಲೋಕದ ಅರ್ಥವಾದರೆ [illegible]

ಶೈತ್ಯವಾಗಲೆಂದು ಚಂದ್ರಕಲೆ[illegible]ದರೂ ಅವನ ದೇಹತಾಪಕ್ಕೆ ಹೆದರಿ ಅವು [illegible]ಯಲಿಲ್ಲ, ಪ್ರಾಣವನ್ನೇ ಕೊಲ್ಲಲೆಂದು ವಿಷವನ[illegible]ನೋ ಎಂದು ಹೆದರಿ ಅದು ಹೃದಯಸ್ಥಾನಕ್ಕೇ ಬರಲಿಲ್ಲ. [illegible] ಅಂತಹುದಾದರೂ ಅದನ್ನೂ ಶಮನಕ್ಕೆ ತಂದ ಶಾಂತಿ ಮಂಗಳವನ್ನು ಮಾಡಲಿ!

# ನಾಂದ್ಯಂತದಲ್ಲಿ

ಸೂತ್ರಧಾರನು—ಸಾಕು, ವಿಸ್ತರದಿಂದೇನು ? ಎಲೈ ಎಲೈ ಮೂರುಲೋಕಕ್ಕೂ ಬೀಜಭೂತನಾಗಿ ಭೂತಪತಿಯೆನಿಸಿದ ಭಗವಂತನಾದ ಭೈರವೇಶ್ವರನ ಯಾತ್ರೆಯಲ್ಲಿ ಸಾಮಾಜಿಕರು ಸುಃಭರಾಗಿರುವರು ಶಾಂತಿರಸಪ್ರಧಾನವಾಗಿ ಶ್ರೀ ಹರಿಹರಪ್ರಣೀತವಾದ ಭರ್ತೃಹರಿ ನಿರ್ವೇದವೆಂಬ ನಾಟಕದಿಂದ ಅವರನ್ನು ಆರಾಧಿಸಲು ನಮಗೆ ಅಪೇಕ್ಷೆಯಾಗಿರುವುದು. ತಾವುಗಳು ಸಾವಧಾನರಾಗಿರಬೇಕು; ಏಕೆಂದರೆ,

ವೃತ್ತ|| ಪಲವುಂ ಜನ್ಮವಿಪತ್ತಿಗಳ್ ನೆರೆಪಿದೇಣೌಕ್ಷ್ಯಾದಿ ಯಾಲಂಬನಂ | ವಿಳಿತಸ್ವಸ್ವಕದೀಪಕಂ ನೆಲಸೆ ಶೃಂಗಾರಾದಿ ಯಂದುಣ್ಮುಗುಂ || ದಲದೊಂದು ಕ್ಷಣಿಕಂ ರಸಂ ಪ್ರತಿಪಲಂ ಪರ್ಯನ್ತ ನಿಸ್ಸಾರಮ | ಲ್ತಲೆ ಶಾಂತಂ ರಸಮುತ್ತಮಂ ಸ್ಥಿರಮುದಾತ್ಮಾದ್ವೈತಸೌಖ್ಯಪ್ರದಂ ||೨||*

---

* ಸಾಲುಸಾಲಾಗಿರುವ ಅನೇಕ ಜನ್ಮ ಮರಣಗಳು ತಂದುಹಾಕಿರುವ ಉತ್ತಮಸ್ತ್ರೀಯರೇ ಮೊದಲಾಗಿ ಆಲಂಬನ ವಿಭಾವಗಳಾಗಲು ಆ ಆ ಉದ್ದೀಪನವಿಭಾವಗಳು ಸಹಕಾರಿಯಾಗಲು ಉತ್ಪನ್ನವಾಗಿ ಪಲಪಲವೂ (ಪಲ ವಿಘಳಿಗೆ; ಒಂದು ತೂಕದ ಪ್ರಮಾಣವೂ ಅಹುದು.) ಕ್ಷಣಿಕವೂ ಪಾರ್ಶ್ವದಲ್ಲಿಯೇ ವಿರಸತ್ವಕ್ಕೆ ಸ್ಥಾನವಾಗಿಯೂ ಇರುವ ಶೃಂಗಾರಾದಿ ರಸವೇನೋ ಇದ್ದೇ ಇರುವುದು. ಆದರೆ ಬ್ರಹ್ಮಾದ್ವೈತಸುಖಾತ್ಮಕವಾಗಿ ಉತ್ತಮವಾಗಿ ಅವಿಚ್ಛಿನ್ನವಾಗಿರುವುದು, ಶಾಂತಿರಸವೊಂದೇ ಅಲ್ಲವೇ ?

1. (ಟಿಪ್ಪಣಿ) ರಸೋದಯಕ್ಕೆ ಯಾವುದು ಕಾರಣವಾಗುವುದೋ ಅದಕ್ಕೆ ವಿಭಾವವೆಂದು ಹೆಸರು. ಅದು ಆಲಂಬನ ವಿಭಾವವೆಂದೂ ಉದ್ದೀಪನವಿಭಾವವೆಂದೂ ಎರಡು ವಿಧವಾಗುವುದು. ಸಮವಾಯಿಕಾರಣವಾದರೆ ಆಲಂಬನವಿಭಾವವೆನಿಸುವುದು (ಸಮವಾಯಿಕಾರಣ Material cause ವೆಂದರೆ ದ್ರವ್ಯಭೂತವಾದ ಮುಖ್ಯಕಾರಣವು. ಉದಾಹರಣೆ:_ಬಟ್ಟೆಗೆ ನೂಲು ಸಮವಾಯಿಕಾರಣ, ಮಡಕೆಗೆ ಮಣ್ಣು ಸಮವಾಯಿಕಾರಣ. ನೆಯ್ಯುವುದಕ್ಕೆ ಬೇಕಾದ ಇತರ ಸಾಮಗ್ರಿಗಳು ನಿಮಿತ್ತಕಾರಣಗಳು. Auxiliary causes ಕುಂಬಾರನ ಚಕ್ರವೇ ಮೊದಲಾದುವು ನಿಮಿತ್ತಕಾರಣಗಳು.) ಉದಾಹರಣೆಗಾಗಿ,-ಶೃಂಗಾರರಸಕ್ಕೆ ಸ್ತ್ರೀಯರು ಆಲಂಬನ ವಿಭಾವವಾಗುವರು.

2. ಆಲಂಬನವಲ್ಲದ ಇತರ ಕಾರಣಗಳು ಉದ್ದೀಪನ (ದೀಪಕ) ವಿಭಾವಗಳೆನಿಸುವುವು. ಇದು ನಾಲ್ಕು ವಿಧವಾಗುವುವು. (೧) ಆಲಂಬನದ ಗುಣ ಉದಾ-ಶೃಂಗಾರದಲ್ಲಿ ಸ್ತ್ರೀಯರ ರೂಪ, ಯೌವನ ಇತ್ಯಾದಿ); (೨) ಆಲಂಬನದ ಚೇಷ್ಟೆ (ಉದಾ-ಶೃಂಗಾರದಲ್ಲಿ ಹಾವ, ಭಾವ, ಇತ್ಯಾದಿ); (೩) ಆಲಂಬನದ ಅಲಂಕಾರ (ಉದಾ-ಶೃಂಗಾರದಲ್ಲಿ ಕಡಗ, ಮುಂಗೆ,

ಆದುದರಿಂದ ನನ್ನ ಗೃಹಿಣಿಯನ್ನು ಕರೆದು ಪ್ರಯೋಗವು ಪ್ರವರ್ತಿಸುವಂತೆ ಮಾಡುವೆನು. (ತೆರೆಯಕಡೆ ನೋಡಿ)—ಆರ್ಯೆ ಇತ್ತಬಾ ಇತ್ತಬಾ.

ನಟಿ—(ಪ್ರವೇಶಿಸಿ), ಆರ್ಯನೇ? ಅವಹಿತೆಯಾಗಿರುವೆನು.

ಸೂತ್ರ—(ನೋಡಿ), ಆರ್ಯೆ! ಇದೇನು ಉದ್ವಿಗ್ನೆಯಾದಂತೆ ಕಾಣುವೆ?

ನಟಿ—ಬಹುಕಾಲವಾಯಿತಲ್ಲವೇ ಆರ್ಯನು ಎಲ್ಲಿಯೋ ಹೊರಟುಹೋಗಿ. ಆದರಿಂದ ಉದ್ವಿಗ್ನೆಯಾಗಿರುವೆನು.

ಸೂತ್ರ—ಆರ್ಯೆ! ಏನೋ ಪ್ರತಿಕೂಲವು ಸಂಭವಿಸುವುದೆಂದು ಜ್ಯೌತಿಷಿಕರೊಬ್ಬರಿಂದ ಕೇಳಿ ಅದನ್ನು ಶಮನಮಾಡಲು ಶಾಂತಿಜಪಮಾಡುವರನ್ನು ಅನುಗೊಳಿಸಲು ಹೋಗಿದ್ದೆನು. ಅದರಿಂದ ನನಗೆ ತಡೆವಾಯಿತು.

ನಟಿ—ಅದು ಹಾಗಾದರೆ ಸರಿಯಾಗಿ ಮುಗಿಯಿತೇ?

ಸೂತ್ರ—ಅಹ! ಅಲ್ಲೇನು?

ಕಂ|| ಪರಿಪೂರ್ಣಮಾಗೆ ಶಾಂತ್ಯಾ |
ಚರಣಂಗಳ್ ಕಾಂತೆ ನಿನ್ನ ಕೆಲಕೆಯ್ದಿದೆನಾ ||
ನರಸನಿದೆ ಭರ್ತೃಹರಿ ತ |
ನ್ನರಸಿಯುವಳ್ ಭಾನುಮತಿಯ ಕೆಲಕಂತಿರೆವೊಲ್ || ೩ ||†

(ಎಂದು ಹೋಗುವರು)

ಇಂತು ಪ್ರಸ್ತಾಪನೆ.



ಹಾರ, ಇತ್ಯಾದಿ); (೪) ತಟಸ್ಥವೆಂದು ಕರೆಯಲ್ಪಡುವುದು ಇನ್ನೊಂದು (ಉದಾ-ಶೃಂಗಾರದಲ್ಲಿ ಮಲಯಮಾರುತ, ಚಂದ್ರ, ಇತ್ಯಾದಿ).

ಈ ವಿಷಯಗಳನ್ನು ಅಲಂಕಾರಶಾಸ್ತ್ರದಿಂದ ತಿಳಿಯಬಹುದು.

† ಎಲೌ ಕಾಂತೆ, ಶಾಂತಿಕರ್ಮವು ಮುಗಿಯಲು ಈ ರಾಜನಾದ ಭರ್ತೃಹರಿ ತನ್ನ ಭಾರ್ಯೆಯಾದ ಭಾನುಮತಿಯ ಬಳಿಗೆ ಬರುವಂತೆ ನಾನು ನಿನ್ನ ಬಳಿಗೆ ಬಂದಿರುವೆನು.

(ಅನಂತರದಲ್ಲಿ ಆಗತಾನೇ ಬಂದ ರಾಜನೂ ಉದ್ವಿಗ್ನೆಯಾದ
ಭಾನುಮತಿಯೂ ಪ್ರವೇಶಿಸುವರು. ವಿಭವದೊಡನೆ
ಪರಿವಾರವು ಪ್ರವೇಶಿಸುವುದು.)

ರಾಜನು—(ದೃಷ್ಟಿಸಿನೋಡಿ) ಇವಳು ಹೀಗೆ ಚಿಂತಿಸುತ್ತಿದ್ದಳೆಂದು ತಿಳಿವೆನು.

ವೃ|| ಮೃಗಯಾಕಾಲಮುಮಲ್ಲಮಲ್ಲಮಿವನೆಂದುಂ ಜೂದೊಳಾಸಕ್ತನುಂ| ಸೊಗಮೆಂತಪ್ಪುದು ಮಿತ್ರಗೋಷ್ಠಿಯೊಳಿವಂಗೆನ್ನಂ ಚಿರಂ ಬಿಟ್ಟಿರಲ್ || ಮಿಗೆ ತುಯ್ದಿರ್ಕುಗುಮಾತ್ಮಚಾರಿಮ ಚಮತ್ಕಾರಂಗಳಿಂ ಜೋಡೆಯಿಂ | ದುಗಡಾ ಆವಳೊ ಪಕ್ಷ್ಮಲಾಕ್ಷಿಯಿವನಾ ನಿರ್ದುಷ್ಟಮಂ ಚಿತ್ತಮಂ ||೪||*

(ಸಾಪವಾದವಾದಂತೆ)

ಕಂ|| ಚಿರದಿಂ ಮಧುರಸ್ಮಿತಮುಂ |
ಮರೆದಿರಲುರೆ ಕೊಂಕುವೆತ್ತಿರಲ್ ಭ್ರೂಲತೆಯಾಂ ||
ತರವಿಾ ಅಸಿಯಳ ತಪಿಕುಂ |
ನಿರವಧಿಚಿಂತೆಯಿನೆನುತ್ತೆ ಘೋಷಿಪುದು ಮೊಗಂ ||೫||‡

(ಹತ್ತಿರಕ್ಕೆ ಬಂದು)

ಪ್ರಿಯೆ, ಏನು ಮನಸ್ಸೇ ಎಲ್ಲಿಯೋ ಹೋದವಳಂತೆ ಕಾಣುವೆ?

ಕಂ|| ಪರಿತುಷ್ಟಂ ನಿನ್ನ ಗುಣವಿ |
ಸರದಿಂದಿರೆ ಕಾಂತೆ ಕ್ರೀತದಾಸನವೋಲಾ ||

---

* ಇವನ ಮನಸ್ಸು ದ್ಯೂತದಲ್ಲಿ ಆಸಕ್ತವಾದುದಲ್ಲ; ಈಗ ಬೇಟೆಯ ಕಾಲವಾಗಿಯೂ ಕಾಣಬರುವುದಿಲ್ಲ; ಇಷ್ಟು ದೀರ್ಘಕಾಲದಿಂದ ನನ್ನನ್ನು ಅಗಲಿರುವ ಇವನಿಗೆ ಮಿತ್ರಗೋಷ್ಠಿಯಲ್ಲಿ ಅಭಿರುಚಿಯಿರುವುದೆಂದರೇನು? ಯಾರೋ ಈಗ ದಪ್ಪಹುಬ್ಬಿನ ಜಾರೆಯೊಬ್ಬಳು ಕೌಟಿಲ್ಯವನ್ನೇ ಅರಿಯದ ಈತನ ಅಂತರಂಗವನ್ನು ಇನ್ನೊಬ್ಬರ ಹೃದಯವು ಚಲಿಸುವಂತೆ ಮಾಡುವ ತನ್ನ ನಿರತಿಶಯಚಮತ್ಕಾರದಿಂದ ಎಲ್ಲಿಯೋ ಅಪಹರಿಸಿರಬೇಕು.

‡ ಬಹುಕಾಲದಿಂದ ಮಂದಹಾಸವು ಮರೆತೇಹೋಗಿರಲು ಲತಾಸದೃಶವಾದ ಹುಬ್ಬು ಅಧಿಕವಾಗಿ ಮೇಲಕ್ಕೆದ್ದು ಬಾಗಿರಲು ಸೂಕ್ಷ್ಮಗಾತ್ರಯಾದ ಈಕೆಯ ಮನಸ್ಸು ಅವಧಿಯೇ ಇಲ್ಲದ ಚಿಂತೆಯಿಂದ ತಪಿಸುತ್ತಿರುವುದೆಂದು ಮುಖವು ಹೇಳುವುದು.

ಚರಿಸುತೆ ನಿನ್ನೊಳ್ ಚಿರದಾ |
ನುರುಚಿಂತೆಯಿದೇಕದಾತ್ಮಜೇತಂ ತಪಿಕುಂ ||೬|| *

(ಎಂದು ಆಲಿಂಗಿಸಿಕೊಳ್ಳಲಿಚ್ಛಿಸುವನು.)

ಭಾನುಮತಿ—ಆರ್ಯಪುತ್ರನಿಗೆ ನಾವು ಅನುವರ್ತನೀಯರಲ್ಲವಲ್ಲಾ ?

ರಾಜ—ಇದೇನು ಹೇಳುವೆ ?

ವೃ|| ಮನೆಯೊಳ್ನೀಂ ನಿಧಿಯೈಸೆ ತನ್ವಿ ಕುಲಕಂ ಕಲ್ಯಾಣ ರತ್ನಾಕರಂ | ಪನಿಕುಂ ತ್ವನ್ನಯನಂ ಹಿತಂ ನಿರುಪಮಂ ನೂತ್ನಾಮೃತಾಸಾರಮಂ || ತನುವುಂ ಚಂದನಪಂಕಮಾಂತ ಘನಸಾರಪೂರದಾ ಆಪ್ಲವಂ | ಮನಮಿನ್ನೇಂ ರತಿಶಿಲ್ಪಕಲ್ಪ ಲತೆನೀಂ ಪಾಸೋಳೆನತ್ತಿಚ್ಛಿಕುಂ ||೭|| †

ಮತ್ತೆ.

ವೃ|| ನಿನತೀ ಕಾಂತಿಯಿನೆನ್ನ ಜೊನ್ನದೊದವಾ ಆರೋಚನಂ ಲೋಚನಂ| ಪನಿಸೋಗ್ಗುರ್ಗಂ ಬಿದುಗಲ್ಲಿನುಂ ಬಳಿ ನಿನತ್ತಂಗಪ್ರಸಂಗಕ್ಕೆನಲ್ || ನಿನತೀ ವಾಕ್ಸುಧಾಘಟಂ ಶ್ರುತಿಪುಟಂ ಪೀರ್ದ್ದರ್ಪ್ಪವೊಲ್ಗೆಯ್ಯುಗಮಿಂ | ತೆನಲೇಂ ವೆಗ್ಗಳಮಿಂ ರಮೇಶನ ನಿವೇಶಂ ಪುಣ್ಯಕೋಟ್ಯರ್ಜ್ಯಮುಂ ||೮|| ‡

* ಪ್ರಿಯೆ, ನಿನ್ನ ಗುಣಗಳಿಂದ ಪ್ರೀತನಾಗಿ ಚಿರಕಾಲದಿಂದ ಕೊಂಡುಕೊಂಡ ದಾಸನಂತೆ ನಾನು ನಿನ್ನಲ್ಲಿ ನಡೆದುಕೊಳ್ಳುತ್ತಿದ್ದರೂ ಇದೇನು ಚಿಂತೆ ಆತ್ಮ (=ನಿನ್ನ, ನನ್ನ,—ಎರಡು ಪಾಠಗಳೂ ಇರುವುವು) ಮನಸ್ಸನ್ನು ತಪಿಸುವುದು ?

† ಎಲೌ ತನುಗಾತ್ರಿ, ನೀನು ಮನೆಯಲ್ಲಿ ನಿಧಿಯೇ ಆಗಿರುವೆ; ಕುಲಕ್ಕೆ ದೊಡ್ಡದೊಡ್ಡ ಅಲೆಗಳನ್ನು ತರುವ ಸಮುದ್ರದಂತೆ ಕಲ್ಯಾಣಪರಂಪರೆಯನ್ನು ತರುತ್ತಿರುವೆ; ನಿನ್ನ ಕಣ್ಣುಗಳಿಂದ ಹೊಸತಾದ ಅಮೃತದ ಮಳೆ ನಿರುಪಮವಾಗಿ ಸ್ವಲ್ಪಸ್ವಲ್ಪವಾಗಿ (ಸುಖಾವಹವಾಗಿ) ಬೀಳುತ್ತಿರುವುದು; ನಿನ್ನ ದೇಹವು ಚಂದನದ ಪಂಕವೂ, ಕರ್ಪೂರದ ನೀರೂ ಇರುವ ದೊಡ್ಡಪ್ರವಾಹದಲ್ಲಿ ಮುಳುಗಿದಂತೆ ಮಾಡುವುದು; ಶಯ್ಯೆಯಲ್ಲಿ ನೀನು ರತಿಶಿಲ್ಪವೇ ರಚಿಸಿದ ಕೋಮಲವಾದ ಕಲ್ಪಲತೆಯಾಗಿರುವೆ; ಇನ್ನು ನನಗಿಲ್ಲದೆನ್ನುವುದು ಯಾವುದು ?

‡ ನಿನ್ನ ಕಾಂತಿಯಿಂದ ನನ್ನ ಲೋಚನಕ್ಕೆ ಕೌಮುದೀಸಮುದಯದ ಆರೋಚನವಾಗುವುದು: ನಿನ್ನಂಗಪ್ರಸಂಗವು ಇಂದುದೃಷತ್ತಿಗೂ ಸ್ಪಷತ್ತಿನ ಪ್ರಸ್ಯಂದನಾಗಿರುವುದು; ನಿನ್ನ ವಾಕ್ಕಿಂದ ಶ್ರೋತ್ರಪುಟವು ಅಮೃತಘಟವನ್ನು ಆಚಮಿಸುವುದು: ಪುಣ್ಯಶತದಿಂದ ಪ್ರಾಪ್ಯವಾದ ಸದಾಪತಿಯ ಸದ್ಮವಾದರೂ ಇನ್ನೇನು ಇದಕ್ಕೆ ಹೆಚ್ಚು ?

ಭಾನು—ಆರ್ಯಪುತ್ರ; ಇದು ಸುಳ್ಳು ಬಿಡಲಿ. ಇಲ್ಲದಿದ್ದರೆ ಇಷ್ಟು ಕಾಲವು ನಿರ್ಘೃಣತ್ವದಿಂದ ಬೇರೆಯೆಡೆಗೆ ಹೇಗೆ ಹೋಗುತ್ತಿದ್ದುದು? ತನ್ನ ವಿಯೋಗದಿಂದ ನನ್ನ ಜೀವಿತವು ಕ್ಷಣವಾದರೂ ಸಹ್ಯವಲ್ಲವೆಂದು ಆರ್ಯಪುತ್ರನು ತಿಳಿದಿಲ್ಲವಲ್ಲಾ!

(ಎಂದಳುವಳು)

ರಾಜ—ದೇವಿ, ಸಂತೈಸಿಕೋ, ಸಂತೈಸಿಕೊ. ಯಾರೋ ಜ್ಯೋತಿಷಿಕನು ಪ್ರತಿಕೂಲವು ಬರುವುದೆಂದು ತಿಳಿಯಪಡಿಸಲು, ಅದಕ್ಕೆ ಶಾಂತಿ ಮಾಡಿಸುವುದಕ್ಕೆ ಇಲ್ಲಿಂದ ಗಂಗಾತೀರಕ್ಕೆ ಹೋಗಿದ್ದೆನು. ಅಲ್ಲಿ ಬ್ರಾಹ್ಮಣರಿಗೆ ಪರತಂತ್ರನಾಗಿ ನಿಲ್ಲಬೇಕಾಯಿತು, ನಿರ್ಘೃಣತ್ವದಿಂದಲ್ಲ. ನೋಡು,

ವೃ|| ಇದೆ ತನ್ನೊಳೊಲವಿಪ್ಪ ಕೈರವಿಣಿಗಾ ಬಲ್ಪೋದವಂ ಮಾಣ್ದಪಂ| ಕಿರಿದಾನುಂ ತುಹಿನಾಂಶುವೇಂ ನಿಜಕರಾಶ್ಲೇಷೋಪಚಾರಂಗಳಂ || ಪರಿಹಾರಂ ಮದಿರಾಕ್ಷಿ ಚಿಂತಿಸೆ ನಗಲ್ಬಾರ್ಪನ್ನೆಗಂ ವಿಯೋಗಕ್ಕದಂ | ಪರಿಪಂಥಿತ್ವದನುಜ್ಞೆಗಾದಿ ದೊರ್ಗಡೆಸರಂ ದೈವಂ ಗಡೇನಾನುಮಂ ||೯|| *

ಭಾನು—ಆರ್ಯಪುತ್ರನೇ? ಪ್ರಿಯವಿರಹಿತೆಯಾದ ಕುಮುದಿನಿ ಮುಚ್ಚಿಕೊಂಡು ದಿನಗಳನ್ನು ಕಳೆವ ಆ ಸ್ನೇಹವು ಅನ್ಯಾದೃಶವಾದುದು. ಅದು ತಾನೇ ಏನು, ಮತ್ತೆಯೂ ಪ್ರಿಯದರ್ಶನವಾಗುವುದೆಂಬ ಪ್ರತ್ಯಾಶೆಯಿಂದ ನನ್ನ ಹಾಗೇ ಜೀವವನ್ನು ಧರಿಸಿರುವುದು.

ರಾಜ—ಅದು ಹಾಗೇ ಸರಿ.

ವೃ|| ಸಮನಿಸವೇಳ್ಕುಮಿಚ್ಛೆಯೆ ನಿವಾಸೆಯೆ ಇಷ್ಟವಿಯೋಗದಾರ್ತರಂ | ಸ್ವಮನಮದೊಳ್ಮೆಯಿಂ ಪರವಶಂಗೊಳೆ ಪ್ರಾಣಮದಂ ನಿಲಿಪ್ಪುದಾ || ಕಮಲಿನಿಯೇತದಲ್ಲದಿರೆ ಬಿಟ್ಟಪನೆ ಕಾಂತಿಯನಂತುಬಾಳ್ಗುವಿಾ | ಕುಮುದಿನಿಗಂ ಸ್ವಜೀವಿತಮದೆಂತುಟು ಪೋದೊಡೆ ಕಾಂತಿ ಚಂದ್ರನಾ ||೧೦|| ‡

---

* ಚಂದ್ರನು ತನಗೆ ಶಕ್ತಿಯಿರಲು ಕುಮುದಿನಿಗೆ ಸಂತೋಷವನ್ನುಂಟುಮಾಡುವ ತನ್ನ ಕರಾಶ್ಲೇಷದ ಉಪಚಾರವನ್ನು ತೊಲಗಿಸುವನೆ? ಎಲೌ ಮದಿರನೇತ್ರೆ, ಪ್ರತಿಕೂಲವಾದ ವಿಧಿಯು ನಿಯೋಗದಿಂದ ಏನಾದರೂ ಅದರ ನಡುವೆ ಬಾರದಿದ್ದ ಪಕ್ಷದಲ್ಲಿ ವಿಯೋಗಕ್ಕೆ ಪರಿಹಾರವನ್ನು ಮಾಡಬಹುದು.

‡ ಪ್ರಿಯವಿರಹದಿಂದ ದುಃಖಿಸುವ ಪ್ರೀತಿಯಿಂದ ಪರವಶರಾದ ಜನರ ಪ್ರಾಣಗಳನ್ನು ಪುನಃ ಅವನ್ನು ಕಾಣಬಹುದೆಂಬ ಆಸೆಯೇ ಪ್ರಾಣಗಳನ್ನು ತಡೆದಿರುವುದೆನ್ನಬೇಕು. ಹಾಗಲ್ಲದಿದ್ದರೆ ಸೂರ್ಯಕಾಂತಿ ಹೊರಟುಹೋಗಲು ಕಮಲಿನಿ ಇರುತ್ತಿತ್ತೇ? ಈ ಕುಮುದಿನಿಯ ಗತಿ ಚಂದ್ರಕಾಂತಿಯಿಲ್ಲದಿದ್ದರೆ ಏನಾಗಬೇಕು!

(ಕೆರೆಯಲ್ಲಿ ಕಲಕಲಮಿಶ್ರವಾದ ವಾದಿತ್ರಧ್ವನಿಯಾಗುವುದು.
ಇಬ್ಬರೂ ಗವಾಕ್ಷದಿಂದ ನೋಡುವರು).

ರಾಜ—(ವಿಸ್ಮಯದೊಡನೆ) ದೇವಿ, ನಾನೇ ಗೆದ್ದೆ. ಇದೋ ಅನುಮರಣಕ್ಕೆ ಪತಿಯ ಹಿಂದೆ ಹೋಗುತ್ತ ವಿರಹಾಗ್ನಿಯನ್ನು ಸಹಿಸಲಾರದೆ ಅಗ್ನಿಯನ್ನು ಪ್ರವೇಶಿಸಲಿಚ್ಛಿಸುವ ಈಕೆ ಸತಿಯರ ಪ್ರಣಯಕ್ಕೆ ಅಪಾರವಾದ ಮಹಿಮೆಯನ್ನು ತರುತ್ತಿರುವಳು.

ವೃ|| ಸತಿಯರ್ಕಳ್ ನಿಮಗೆಂದು ಪತ್ತಿಗಡರಲ್ ಕಾದಲ್ಮೆಯೇಂ ಪೆಮ್ಮೆಯೆಂ | ಪತಿಯಗ್ಗರ್ಪುದದಾಸ್ಸುಗಮಿಂತು ಮೃದುಳಂ ಪೂವಾಸವೋಲೇತರಿಂ || ಚಿತಿಯುಕ್ಕುಂ ಪರಿಕಂಪಿ ಪಗ್ನಿಯುರಿಗಳ್ ಶ್ರೀಗಂಧಸಾರಂಬೊಲೇ | ಹಿತಶೀತಂ ಕುಸುಮೇಷುವೋಲ್ಪಿಲಸಿಕುಂ ಕ್ರೂರಂ ಕೃತಾಂತಂ ವಲಂ ||೧೧|| *

ಭಾನು—ಆರ್ಯಪುತ್ರನೇ? ಇವರ ಪ್ರಣಯಪರ್ಯವಸಿತವಾದ ಇದೂ ಅಸದೃಶವೇ; ಏಕೆಂದರೆ, ಥಟ್ಟನೆ ಉರಿಯುತ್ತಿದ್ದ ವಿರಹಾಗ್ನಿಯನ್ನು ಬಿಟ್ಟು ಚಿತಾಗ್ನಿಯನ್ನು ಅಪೇಕ್ಷಿಸುವುದಲ್ಲವೇ?

ರಾಜ—(ತನ್ನಲ್ಲಿ) ಇದೇನು, ಇವಳ ಈ ನಿಶ್ಚಯವು ದೂರಕ್ಕೆ ವ್ಯಾಪಿಸುವುದು! ಅದೇಕೆ, ಮೋಸವು;

ಕಂ|| ಇವೆ ನನಸು ವಂಚಿಸಲಿಕ್ಕೊ |
ಡ್ಡುವ ಪೆಣ್ಗಳ ವಾಗುರಾಪ್ರತಾನಮೆನಿಕ್ಕುಂ ||
ಯುವರಪ್ಪರಗತಿಕಂ ನಿ |
ಲ್ಕವಸನ್ನರ್ ಮೃಗಕದಂಬದಂತೆವೊಲಿದರೊಳ್ ||೧೨|| †

(ಪ್ರಕಾಶವಾಗಿ) ದೇವಿ, ಇದೆಂತಹುದಿದು, ನಿನ್ನ ನಿಶ್ಚಯವು?

ಭಾನು—ಆರ್ಯಪುತ್ರನ ವಿರಹವನ್ನು ಸಹಿಸಲಾರದ ನನ್ನ ಹೃದಯದ ನಿಶ್ಚಯವು ಇದೇ.

---

* ಸತಿಯರಾದ ನಿಮಗೆ ಪತಿಯಲ್ಲಿರುವ ಪ್ರಣಯವು ಪರಿಪಾಕಕ್ಕೆ ಬರಲು ಅದರ ಮಹಿಮೆಯೇನೆಂದು ಹೇಳುವ! ಏಕೆಂದರೆ, ಚಿತಿ ಮೃದುವಾದ ಹೂವಿನ ಹಾಸುಗೆಯಂತಾಗುವುದು; ಅದಿರುತ್ತಿರುವ ಬೆಂಕಿಯ ಜ್ವಾಲೆಗಳೂ ಚಂದನರಸದಂತಾಗುವುದು; ಕ್ರೂರನಾದ ಯಮನೂ ಕುಸುಮಾಸ್ತ್ರನಂತೆ ವಿಲಾಸಿಸುವನು.

† ಇವೇ ಸ್ತ್ರೀಯರ ಹರಡಿದ ಮೋಸದಬಲೆಗಳು; ಇವುಗಳಲ್ಲಿ ತರುಣರು ಹರಿಣಗಳಂತೆ ಬದ್ಧರಾಗಿ ದುಃಖಕ್ಕೆ ಗುರಿಯಾಗುವರು.

ರಾಜ—(ತನ್ನಲ್ಲಿ) ಹಾಗಾದರೆ ಇದು ತಿಳಿಯತಕ್ಕುದಾಗಿರುವುದು. ಇರಲಿ, ಹಾಗೆ ಮಾಡುವೆನು. ಈಗ ಬೇಟೆಯ ಪ್ರಸಕ್ತಿಯೇ ಆಗಲಿ. (ಪ್ರಕಾಶವಾಗಿ) ಬಹುಕಾಲಕ್ಕೆ ಬೇಟೆಯಲ್ಲಿ ಉತ್ಸುಕರಾಗಿ ಸೈನಿಕರು ನನ್ನನ್ನು ಕರೆಯುತ್ತಿರುವರು. ದೇವಿ, ಆದುದರಿಂದ ನಾನು ಬೇಟೆಗೆ ಹೋಗಿ ಬರಲು ಬಿಟ್ಟುಕೊಡು. ಅಲ್ಲಿಂದ ಬೇಗನೇ ಬಂದುಬಿಟ್ಟು ನಿನ್ನನ್ನು ಸಂಭಾವಿಸುವೆನು.

ಭಾನು—(ಕಣ್ಣೀರಿಂದ ಉಪರೋಧಿಸುತ್ತ) ಈ ವಿಷಯದಲ್ಲಿ ನಾವು ಅಶಕ್ತೆಯರು.

(ರಾಜನು ಹೋಗುವನು)

ಭಾನು—(ಕಣ್ಣೀರುಸುರಿಸುತ್ತ ರಾಜನ ಹಿಂದೆ ಹೋಗಿ) ದ್ವಾರಸ್ತಂಭವನ್ನು ಆಶ್ರಯಿಸಿಕೊಂಡು ಆರ್ಯಪುತ್ರನ ಮಾರ್ಗವನ್ನು ಚೆನ್ನಾಗಿ ನೋಡುವೆನು.

(ಎಂದೆಲ್ಲರೂ ಹೋಗುವರು)

ಇಂತು ಪ್ರಥಮಾಂಕಂ.



# ದ್ವಿತೀಯಾಂಕಂ.

---

(ಅನಂತರದಲ್ಲಿ ಪಟಾಕ್ಷೇಪದಿಂದ ಅಳುತ್ತಿರುವ
ಚೇಟಿ ಪ್ರವೇಶಿಸುವಳು)

ಚೇಟಿ—(ಎದೆಯನ್ನು ಬಡಿದುಕೊಂಡು) ಅಯ್ಯೋ, ಹತಭಾಗಿನಿಯಾದ ನಾನು ಕೆಟ್ಟೆನು.

ಇನ್ನೊಬ್ಬಳು—(ಪ್ರವೇಶಿಸಿ) ಸಖಿ, ಇದೇನು ಅಂತಃಪುರದಲ್ಲಿ ಕಲಕಲವು?

೧ ನೆಯ—(ಅತ್ತು) ಅಯ್ಯೋ, ಸಖಿ, ನಮಗೆ ಬೇಕಾದುದೆಲ್ಲವನ್ನೂ ಒದಗಿಸಿಕೊಡುತ್ತಿದ್ದಳು; ನಗರಿಗೆ ಬೈತಲೆಯ ಮಣಿಯಾಗಿದ್ದಳು; ಬಂಧುಹೃದಯಗಳಿಗೆ ಅಪೇಕ್ಷಿಸಿದುದನ್ನು ಕೊಡುವ ಕಲ್ಪಲತೆಯಾಗಿದ್ದಳು; ಮಹಾರಾಜನಿಗೆ ಹೃದಯಾನಂದವೇ ಆಗಿದ್ದಳು; ಅವಳು ಮೃಗದಿಂದ ಮಹಾರಾಜನು ಕೊಲ್ಲಲ್ಪಟ್ಟನೆಂಬ ಸುಳ್ಳುಸುದ್ದಿ ಕೇಳಿ ಪ್ರಾಣಬಿಟ್ಟಳು.

೨ ನೆಯ—(ನಡುಗುತ್ತ ಕಣ್ಣೀರು ಸುರಿಸಿ) ಹಾ ಯಾರವನು ಕಿಡುಕನು ಈ ಸುಳ್ಳನ್ನು ಹೊರಪಡಿಸಿದವನು ?

೧ ನೆಯ—ಮಹಾರಾಜನ ಬಳಿಯಿಂದಲೇ ಬಂದ ದುರಾಖ್ಯಾಯಿ. ಬಳಿಕ ಇದು ಸುಳ್ಳೆ [illegible] ಅವನೇ ತಿಳಿಸಿ ಎಚ್ಚರಿಸಿಹೋದರೂ ಏಳಲೇಇಲ್ಲ.

ಇಬ್ಬರೂ—(ಕರುಣದೊಡನೆಕೂಡಿದ ಬಹುಮಾನದಿಂದ)

ಕಂ|| ಪುಸಿಯುಮನಿನನಳಿವಂಕೇ |
ಳ್ದುಸುವಂತೊರೆದಿರ್ಪ ನಿನ್ನ ತೊಳ್ಗುಸದೀಗಳ್ ||
ಅಸವಸವಿಶಾಕಾದಳ್ಕೆಗ |
ಡೆಸಕಂಕ್ಕೈಸೇರ್ವೊಡೆಂಬುದಳಿದತ್ತಯಶಂ ||೧೩|| *

(ತೆರೆಯಲ್ಲಿ ಕಲಕಲವಾಗುವುದು)

ಇಬ್ಬರೂ-ಏನು, ಈಗ ದೇವಿಯನ್ನು ಊರಿಂದ ಹೊರಗೆ ತೆಗೆದುಕೊಂಡುಹೋಗುತ್ತಿರುವರು. ಇವನೇಆದುರಾಖ್ಯಾಯಿ. ಚೇಟಿಯಿಂದಹಿಂದಕ್ಕೆಬಂದಮಹಾರಾಜನಬಳಿಗೆ

---

* ಪ್ರಿಯಮರಣವು ಸುಳ್ಳಾದರೂ ಅದನ್ನು ಕೇಳಿ ಮೃತೆಯಾದ ನಿನ್ನ ಕೀರ್ತಿಯಿಂದ ಇವು ಕಾರ್ಕಶ್ಯಾಗಿ ದೊಡ್ಡದು ಎಂಬ ಹೃದಯಕ್ಕಿದ್ದ ಅಪಯಶಸ್ಸು ಹೋಗಲಾಡಿಸಲ್ಪಟ್ಟಿತು

ಹೋಗುತ್ತಿರುವನು. ಆದುದರಿಂದ ನಾವು ದೇವಿಯ ಹಿಂದೆಯೇ ನಡೆದು ನಮ್ಮ ಕೆಲಸವನ್ನು ಸರಿಯಾಗಿ ಮಾಡುವ.

(ಎಂದು ಹೋಗುವರು)

ಇಂತು ಪ್ರವೇಶಕವು.

---

(ಅನಂತರದಲ್ಲಿ ಬೇಟೆಯಿಂದ ಹಿಂದಿರುಗಿದ ರಾಜನು
ಪರಿಜನರೊಡನೆ ಪ್ರವೇಶಿಸುವನು.)

ರಾಜ — (ಎಡಗಣ್ಣದಿರುವುದನ್ನು ಸೂಚಿಸಿ)

ಕಂ|| ಬರುವ ಹಿತಾಹಿತಮಂ ಜನ |
ಮರಿಯಲ್ಕಿಚ್ಛೆಯನೆ ಗೈಯ್ಯದೆಂತಾನುಮಿದ ||
ಚ್ಚರಿ ಮುನ್ನಮೆ ತಿಳಿದದನಿಂ |
ತೊರೆಗುಮದಿರ್ದ್ದಂಗಮವರ ಜಡಮೆನಿಸಲೊಡಂ ||೧೪|| *

(ಚಿಂತಿಸಿ ಉದ್ವೇಗದಿಂದ) ಇದು ನಿಜವಾಗಿಯೂ ನನ್ನದೇ ಆದ ದುರ್ಮಂತ್ರಿತದ ದುರ್ವಿಪಾಕಫಲವನ್ನು ಸೂಚಿಸುವುದು ಸರಿ.

ವೃ|| ಇವಳ್ಗಯ್ಯೋ ಪ್ರಣಯಾಕುಲಂ ಹೃದಯದೊಳಿರ್ದ್ದತ್ತಲೇ ನಿಶ್ಚಯಂ | ಧ್ರುವಮೆಯ್ದಲ್ ಮೃದುಗಾತ್ರೆಗಿಷ್ಟವಿರಹಂ ಪ್ರಾಣಂಬಿಡಲ್ ಸತ್ವರಂ|| ಅವಿನೀತಂ ಗುಣದೊಳವೊಂದವ ಗುಣಾರೋಪಕ್ಕದಾಂ ನಿರ್ನ್ನೆರಂ | ತವಕಂ ಬರ್ಪ್ಪುದು ಯತ್ನಿಸಿರ್ದ್ದೊಡಿದರೊಳ್ ಯುಕ್ತಂ ಫಲಂ ದಾರುಣಂ ||೧೫|| †

(ಬಳಿಕ ನಡುಗುತ್ತ ದುರಾಖ್ಯಾಯಿಪುರುಷನು ಪ್ರವೇಶಿಸುವನು)

ದುರಾಖ್ಯಾಯಿಪುರುಷನು — ದೇವ, ದೇವಿಯ —

(ಎಂದು ಅರ್ಧೋಕ್ತಿಯಲ್ಲಿ ವಾಕ್ಸ್ತಂಭವನ್ನು ನಟಿಸುವನು)

---

* ಹೇಗೋ ಜನರು ಬೇರೆ ತಮಗೆ ಪ್ರಾಪ್ತವಾಗುವ ಹಿತಾಹಿತಗಳನ್ನು ತಿಳಿದುಕೊಳ್ಳಲು ಇಚ್ಛೆಯನ್ನೇ ಪಡುವದಿಲ್ಲ; ಆದರೆ ಅಂಗಗಳು ತಾವು ಜಡವಾದುವಾದರೂ ಅವನ್ನು ಮೊದಲೇ ತಿಳಿದುಕೊಂಡು ಸ್ಫುರಿಸುವುದರ ಮೂಲಕವಾಗಿ ಅವನ್ನು ತಿಳಿಯಪಡಿಸುವುವೆಂಬುದು ಆಶ್ಚರ್ಯವು.

‡ ಅಯ್ಯೋ, ಮೃದುಗಾತ್ರೆಯಾದ ಇವಳಿಗೆ ಪ್ರಣಯಾಕುಲವಾದ ಹೃದಯದಲ್ಲಿ ಪ್ರಿಯವಿರಹವು ಸಂಭವಿಸಿದ ಪಕ್ಷದಲ್ಲಿ ಪ್ರಾಣವನೇ ಬಿಡುವ ದೃಢನಿಶ್ಚಯವಿದ್ದೇ ಇತ್ತು. ಇದರಲ್ಲಿ ನಾನು ಗುಣದಲ್ಲಿಯೂ ಕಾರಣವಿಲ್ಲದೆ ದೋಷವನ್ನು ಆರೋಪಿಸಿದ್ದೆನಾದರೆ ಪಾಪಿಯಾದ ನನಗೆ ಅದಕ್ಕೆ ತಕ್ಕ ಫಲವೂ ಪ್ರಾಪ್ತವಾಗುವುದು

ರಾಜ—(ಉದ್ವೇಗದೊಡನೆ) ದುರಾಖ್ಯಾಯಿಯೇ ? ದೇವಿಯ-ಏನು ?

ದುರಾ—ದೇವನನ್ನು ಮೃಗವು ಕೊಂದುಬಟ್ಟಿತೆಂದು, ಪ್ರಕಾಶಿಸೆಂದು ದೇವನ ಆಜ್ಞೆಯಾಗಲು ಆ ಸುದ್ದಿಯನ್ನು ನನ್ನ ಬಾಯಿಂದ ಕೇಳುವುದೂ—

ರಾಜ—(ಖೇದದೊಡನೆ)

ವೃ|| ಮನಮೇಂ ದೇವಿಯ ಮೂರ್ಛೆಯಂಧತಮದೊಳ್ ಬಿಳ್ದಿರ್ಪುದೇ ಖೇದದಿಂ | *

ದುರಾ—ದೇವನ ಮಾರ್ಗವನ್ನೇ ನೋಡುವುದಕ್ಕಾಗಿ ಬಾಗಿಲ ಬಳಿಯ ಕಂಬವನ್ನು ಆಶ್ರಯಿಸಿಕೊಂಡಿದ್ದ ಹಾಗೆಯೇ—

ರಾಜ—(ಬಾಷ್ಪದೊಡನೆ, ಗದ್ಗದಸ್ವರದಿಂದ)

ಎನಗೇಂ ಆಯ್ತು ಹತಂಗೆ ಮೇಣ್ ಜಗಮಿದೇಂ ಮೂರುಂ ತಮಿಸ್ರಾಯಿತಂ||†

ದುರಾ—ಇನ್ನೇನು ಹೇಳಬೇಕು ಉಸಿರು ಹೊರಟೇ ಹೋಯಿತು, ಹಿಂತಿರುಗಲೇ ಇಲ್ಲ.

(ರಾಜನು ಮೂರ್ಛೆಗೊಂಡು ನೆಲದ ಮೇಲೆ ಬೀಳುವನು)

ದುರಾ—(ಹಿಡಿದುಕೊಂಡು) ದೇವನೆ ಸಂತೈಸಿಕೊಳ್ಳಬೇಕು.

ರಾಜ—(ಕೊಂಚ ಸಂತೈಸಿಕೊಂಡು)

ವನಜಾತಾಕ್ಷಿಯ ದೇಹದಿಂದುಸಿರನಿತ್ತೇ ಅಲ್ಲವೆಲ್ಲಂ ಗತಂ | ಮನೆಯಿಂ ದೈವಹತಂ ಹ ! ಭರ್ತೃಹರಿಯಾ ಪೋಯ್ತೈಹಿಕಂ ವೈಭವಂ ||೧೬|| ‡

(ಎಂದು ಮತ್ತೆ ಮೂರ್ಛೆಹೋಗಿ ಬೀಳುವನು)

(ಪರಿಜನರು ಹಿಡಿದುಕೊಳ್ಳುವರು).

ರಾಜ—(ಎಷ್ಟೋಹೊತ್ತಿನ ಮೇಲೆ ಎಚ್ಚರವನ್ನು ಹೊಂದಿ ಏನು ಆ ಆ ಲಲಿತವಿಲಸಿತಗಳೆಲ್ಲವೂ ಮಾರಿಹೊರಟೇ ಹೋದುವೇ ? ಅಯ್ಯೋ,

---

* ಏನು ದೇವಿಯ ಮನಸ್ಸು ಮೂರ್ಛೆಯಕಾಳರಾತ್ರಿಯಲ್ಲಿ ಬಿದ್ದುಹೋಯಿತೇ !

† ಇಲ್ಲದಿದ್ದರೆ ಹತಭಾಗ್ಯನಾದ ನನಗೇ ಜಗತ್ರಯವೂ ಅಂಧಕಾರದಂತಾಯಿತೇ ?

‡ ಕಮಲೇಕ್ಷಣೆಯ ದೇಹದಿಂದ ಹೊರಟುಹೋದ ಶ್ವಾಸಗಳೇ ಹೋದುವೆಲ್ಲವೂ ಅಲ್ಲ ; ಹಾ, ಭರ್ತೃಹರಿಯ ಮನೆಯಿಂದ ಜೀವಲೋಕೋತ್ಸವಗಳೇ ದೈವಹತಗಳಾಗಿ ಹೊರಟು ಹೋದುವು.

ಕಂ|| ಪರಿದುದೆ ಅಕಟ ತಥಾವಿಧ |
ನಿರೀಕ್ಷಿತಂ ಕಣ್ಣಿನವಳ ಅಂತಿರ್ದುದರಿಂ ||
ತೊರೆದತ್ತೆ ಹ ಹಾ ಬಾಯುಮ |
ನಿರದಾ ಅಂತಿರ್ದುದೀರಿತಂ ಸ್ಮಿತಮಧುರಂ ||೧೭|| †

(ಉತ್ಕಂಠಿತನಾಗಿ) ಈಗ ದೇವಿಯೆಲ್ಲಿರುವಳು, ಹೇಳು.

ದುರಾ—ದೇವಿಯನ್ನು ಊರಿಂದ ಹೊರಗೆ ತೆಗೆದುಕೊಂಡು ಹೋಗುತ್ತಿದ್ದುದನ್ನು ಕಂಡೆನು.

ರಾಜ—[ಖೇದದಿಂದ] ಏನು, ಚಿತೆಯಲ್ಲಿ ದೇವಿಯನ್ನು ದಹಿಸಬೇಕೆಂದು ಬಂಧುಗಳು ವ್ಯವಸಿತರಾಗಿರುವರೇ? [ಉನ್ಮಾದದಿಂದ ನಡೆದು] ಕೋಪದಿಂದ ಉಂಟೇ, ಉಂಟೇ, ಹಾಗೆ ಕೂಡದು.

ವೃ|| ಇವಳ ಸ್ನಿಗ್ಧಶಿರೀಷಕೇಸರಶಿಖಾಮೃದ್ವಂಗಮಂತಕ್ಕುದೇಂ | ಕವಿಯಲ್ ದಾರುಚಿತಂ ಚಿತಾಗ್ನಿಯುಕಟಾ ಪ್ರೋದ್ಧೂಮಮೆನ್ನಂಗದೊಳ್ || ಅವಿಯುಕ್ತಂ ಮೆರೆದಪ್ಪಿ ತೋಳ್ಗಳಿನತೀ ಸಲ್ಲಳ್ ನಿಜಾಂಗಂಗಳಂ | ಪ್ರವರಸ್ನೇಹಯುತಕ್ಕೆ ಜೋಳಿದಪಳೀ ಕಾಮಾಗ್ನಿಗಿಂದೆನ್ನ ದಲ್ ||೧೮|| *

(ಪರಿಕ್ರಮಿಸಿ ನೋಡಿ) ಇದೋ ಈ ಶ್ಮಶಾನದಲ್ಲಿ ನನ್ನ ಪ್ರಾಣೇಶ್ವರಿಯಿರುವಳು. ಅಯ್ಯೋ, ಕಷ್ಟ, ಕಷ್ಟ.

ವೃ|| ಅರೆಸುಟ್ಟಿರ್ಪ ಶವಾಂಗಮಂ ಚಿತಿಯಿನೀ ಬಳ್ಕ್ಯೊಡ್ತುರುಳ್ಚೊಳಿಪಲ್ | ಹರಿಸಕ್ಕಳ್ಕಿ ಜಣಂ ತಳರ್ವ ಪಲವುಂ ಗೃಧ್ರಾಸ್ಸಿತಂ ಕಳ್ಗಿಕ || ಣ್ಪರಳ್ಚಾ

---

† ಅಯ್ಯೋ, ಹಾಗಿದ್ದ ಅವಳ ಕಣ್ಣನ್ನು ಆವಿಧದ ನೋಟವು ಏನು ಬಿಟ್ಟು ಹೋಯಿತೇ? ಸ್ಮಿತಮಧುರವಾದ ಅಂತಹ ನುಡಿಯೂ ಅವಳ ಬಾಯನ್ನು ಅಯ್ಯೋ ಬಿಟ್ಟು ಹೋಯಿತೇ!

* ಅಯ್ಯೋ, ಕೋಮಲವಾದ ಶಿರೀಷಪುಷ್ಪದ ಕೇಸರದ ಶಿಖೆಯಂತೆ ಮೃದುವಾದ ಇವಳ ಅಂಗವನ್ನು ಅಧಿಕವಾದ ಹೊಗೆಯೂ ಬೆಂಕಿಯೂ ಕೂಡಿದ ಕಾಷ್ಠಮಯವಾದ ಚಿತೆ ಆವರಿಸುವುದು ಯುಕ್ತವಲ್ಲ. ನನ್ನ ತೋಳುಗಳು ಬಳಸಿರಲು ನನ್ನ ದೇಹದ ಮೇಲೆ ಇಡಲ್ಪಟ್ಟು ಸ್ನೇಹೋದ್ಭೂತವಾದ ನನ್ನ ಕಾಮಾಗ್ನಿಯಲ್ಲಿ ಅಯ್ಯೋ, ಈ ಶ್ರೇಷ್ಠಗಾತ್ರೆ ಈ ದಿವಸ ತನ್ನ ಅವಯವಗಳನ್ನು ಆಹುತಿಹಾಕಲಿ.

ಮೂಗನಳುರ್ವ್ವ ಕಂಪಿನಿಡಿದೀ ಧೂಮಾನ್ವಿತಂ ಮದ್ಗೃಹೇಂದಿರೆಯಾ ದೇಹಕಿದಾಯ್ತೆ ಇಂಬು ಭಸಿತಸ್ಥಾನಂ ಶ್ಮಶಾನಂ ಹಹಾ ||೧೯|| †

(ಎಂದು ಮೂರ್ಛೆಹೋಗಿ ಬೀಳುವನು)

(ತೆರೆಯಲ್ಲಿ ಕಲಕಲವಾಗುವುದು)

ಪರಿಜನರು—(ರಾಜನನ್ನು ಹಿಡಿದುಕೊಂಡು) ಇದೋ ನಿಜಬಾಂಧವರೆಲ್ಲರೂ ದೇವನಿಗೆ ಪ್ರಾಪ್ತವಾದ ಅವಸ್ಥಾಂತರವನ್ನು ನೋಡಿ ರೋದಿಸುತ್ತಿರುವರು.

ರಾಜ—ಏನು, ಇನ್ನೂ ಭರ್ತೃಹರಿ ಬದುಕಿರುವನೆಂದು ಬಂಧುಜನರು ತಿಳಿದಿರುವರೇ ? ಎಲೈ, ಎಲೈ, ಬಂಧುಗಳಿರಾ,

ವೃ|| ಪುಸಿಯೆನ್ನತಪ್ಪೊಡಮದಂ ಮೃತಿ ಕೇಳ್ವುದುಂ ತಾನಸುವಂ ಲಘೂಕರಿಸಿ ಪುಲ್ಲಿನುಮಲ್ತೆ ಬಿಟ್ಟಳ್ || ಅಸಿಯಳ್ ದಿಟಂ ಬರ್ದುಗೆಯೊಂದೆ ನಿರಾಶನಿಂದೀ | ಕ್ಷಿಸುತುಂ ಸಜೀವನಮೆ ಭರ್ತೃಹರಿ ಪ್ರವಿಖಾತಂ ||೨೦|| *

(ಹತ್ತಿರಕ್ಕೆ ಸರಿದು ತೆರೆಯೊಳಗೆ ನೋಡಿ ಕರುಣದಿಂದ) ದೇವಿ ಇದೇನು ?

ವೃ|| ನಳಿಮೆಯ್ ಕುಂದುಗುಮಾಂತ ಕುಂಕುಮದಿನುಂ ಪೂಮಾಲೆಪಣ್ಪಿಂದಮುಂ | ಬಳಲ್ಗುಂ ನಿನ್ನತು ಮಾಗಿನೇಸರವಲೋಕಕ್ಕಂ ಗಡಿಂತಪ್ಪುದಂ || ಅಳುರ್ವಂ ಬೂದಿಯ ಜುಜ್ಜರಳಲ್ವುವ ಚಿತಾದುಸ್ಸ್ಪರ್ಶದೀ ಭಾರಮಂ | ಜ್ವಲನೋನ್ಮಾದದುರೂತ್ತರಂಗಿವೆಯುಮಂ ನೀಂ ಸೈಪೆಯೆಂತಕ್ಕಟಾ ||೨೧|| ‡

---

† ಚಿತೆಯಲ್ಲಿ ಅರೆಸುಟ್ಟಿರುವ ಅವಯವಗಳುಳ್ಳ ಶವಗಳನ್ನು ಎಳೆದು ಸಂತೋಷದಿಂದ ಫೇತ್ಕರಿಸುವ ಈ ನರಿಗಳ ಕೂಗಿಂದ ಒಂದುಕ್ಷಣ ಬೆಚ್ಚಿ ಇಲ್ಲಲ್ಲಿ ಹಾರಾಡುವ ಹದ್ದುಗಳಿಂದ ಕೂಡಿದುದಾಗಿಯೂ ಮೂಗಿನ ಹೊಳ್ಳೆಗಳನ್ನು ಹೊಡೆಯಬಲ್ಲುದಾದ ಹೆಚ್ಚಿದ ಗಂಧವುಳ್ಳುದಾಗಿ ಕಣ್ಣನ್ನೇ ಕುರುಡುಮಾಡುವ ಹೊಗೆಯ ಕತ್ತಲೆಯುಳ್ಳುದಾಗಿಯೂ, ಎಲ್ಲೆಲ್ಲಿಯೂ ಬೂದಿ ತುಂಬಿರುವುದಾಗಿಯೂ ಇರುವ ಈ ಶ್ಮಶಾನವು ನನ್ನ ಮನೆಯ ಲಕ್ಷ್ಮಿಯ ದೇಹಕ್ಕೆ ಆಶ್ರಯವಾಯಿತೇ ?

* ಯಾವಳು ಸುಳ್ಳೇ ಆದ ನನ್ನ ಮರಣವೃತ್ತಾಂತವನ್ನು ಕೇಳಿದ ಕೂಡಲೇ ಪ್ರಾಣಗಳನ್ನು ಹುಲ್ಲಿಗೂ ಕಡೆಯಾದಂತೆ ಬಿಟ್ಟುಬಿಟ್ಟಳೋ ಅವಳು ಯಥಾರ್ಥವಾಗಿಯೂ ಸತ್ತುಹೋದುದನ್ನು ಕಂಡು ಜೀವವನ್ನು ಧರಿಸಿದ್ದರೂ ನಿರಾಶನಾದ ಭರ್ತೃಹರಿ ಬದುಕಿಲ್ಲವೆಂದು ತಿಳಿಯಿರಿ.

‡ ಕುಂಕುಮಗಂಧದ ಲೇಪದಿಂದಲೂ ಕಾಂತಿ ಕುಂದುವುದು, ಹೂವನ್ನು ಮುಡಿಕೊಂಡರೂ ಅಂಗವೆಲ್ಲವೂ ಬಳಲಿಹೋಗುವುದು, ಶಿಶಿರರ್ತುವಿನ ಆದ ಸೂರ್ಯನು ನೋಡಿದರೂ ಬಾಡಿಹೋಗುವುದು; ಹೀಗಿರುವ ಮೆಯ್ಯು ನಿನ್ನದು. ಅಂತಹ ನೀನೇ ಅಯ್ಯೋ. ಬೆಂಬೂದಿ

ಪರಿಜನರು—(ತೆರೆಯ ಕಡೆ ನೋಡಿ) ಇದೋ ಮಹತ್ತರಕನಾದ ದೇವತಿಲಕನು ಬರುತ್ತಿರುವನು.

(ಬಳಿಕ ಮಹತ್ತರಕನು ಪ್ರವೇಶಿಸುವನು)

ದೇವತಿಲಕನು—ದೇವತಿಲಕನೇ, ಆಶ್ವಾಸಿಸಿಕೊಳ್ಳಬೇಕು.

ರಾಜ—ಹೇಗೆ ಆಶ್ವಾಸಿಸಿಕೊಳ್ಳುವುದು.—

ಕಂ|| ಉಗಿದಿಹದಿಂದಾಶ್ವಾಸಂ |
ಸೊಗವೋಡಿತ್ತಿದಿವಳೊಡನೆ ವಿಧಿಹತನೆನ್ನಂ ||
ಬಿಗಿದಪುದಿಂಕಿತ್ತಲ್ ತದ |
ನುಗಮಂ ದುರ್ದೈವನಸುವನೂ ! ಗತಿಯೆಕಟೇಂ ||೨೨|| *

ಮತ್ತೆ ನಾನೇ ಪ್ರಿಯತಮೆಯನ್ನು ವೋಸಗೊಳಿಸಿ ಈ ವಿಪತ್ತನ್ನು ನನ್ನ ಮೇಲೆಯೇ ತಂದುಕೊಂಡೆನು. ಹೀಗಾಯಿತೇ.

ವೃ|| ಎನತೇ ಕಯ್ಯಿನಗುಳ್ದಡಂ ಹತಧಿಯೊಂ ಬಿಳ್ದೇನಲೇ ಕೂವಡೋ |
ಳೆನತೇ ಕಯ್ಯಿನಲರ್ಚ್ಚಿ ಚುಂಬಿಸಿದೆನೀನಾಗೇಶಘೋರಾಸ್ಯಮಂ || ಎನತೇ ಕೂರಸಿ
ಗೊಂಡು ನಿರ್ಘೃಣಮೆನತ್ತೇ ದೇಹಮಂ ಪೊಯ್ದೆನಾ | ಹೆನತೇ ನಿದ್ರಿಸುತಗ್ಗಿಯಂ
ಮನೆಯೊಳಾಂ ಕಯ್ಯಿಂ ಕದಕ್ಕೊಟ್ಟೆದೆಂ ||೨೩|| †

ದೇವ—ಮಹಾರಾಜನೇ, ದುಃಖಹೇತು ಅತಿಮಹತ್ತೇ ಆದರೂ [illegible]ದರಲ್ಲಿ ಕೀಲಿಸಿರುವ ಮನಸ್ಸನ್ನು ಸಡಿಲಿಸಿ ಮಹಾಜನರು ಆಶ್ವಾಸಿಸುವರು.

ರಾಜ—ಕಂ|| ಅಣುವಮಾನುಮಿರಲಹಬ್ಜೇ |
ಕ್ಷಣೆಯೊಳ್ ವಿಗುಣತೆ ಮನಂ ಸಡಿಲ್ದುಮಿದವಳಾ ||

---

ಆವರಿಸಲು, ದಾರುಣವಾದ ಚಿತೆಯ ಕೆಟ್ಟ ಶವದೆಗಳು ಮೇಲೆ ಬೀಳಲು. ತಾನೇತಾನಾಗಿ ಗಹನವಾದ ಧ್ವನಿಮಾಡುತ್ತಿರುವ ಉರಿಗಳ ಮಧ್ಯದಲ್ಲಿ ನೀನು ಹೇಗೆನಿಲ್ಲುವೆ?

* ವಿಧಿಹತನಾದ ನನ್ನನ್ನು ಬಿಟ್ಟು ಈ ಆಶ್ವಾಸವು ಜೀವಲೋಕದಿಂದ ಇವಳೊಡನೆ ಸುಖವಾಗಿ ಹೊರಟುಹೋಯಿತು. ಅಯ್ಯೋ. ಇತ್ತ ಅವಳನ್ನು ಅನುಸರಿಸಿದ ಈ ಪ್ರಾಣಗಳನ್ನು ಊ! ದುರ್ದೈವವು ಬಿಗಿದು ಕಟ್ಟಿರುವುದು ಯಾವರೀತಿ ಮಾಡಬೇಕೋ ಕಾಣೆನು.

‡ ಅಯ್ಯೋ, ಬುದ್ಧಿಯಿಲ್ಲದ ನಾನೇ ಬಾವಿಯನ್ನು ತೋಡಿ ಅದಕ್ಕೆ ನನ್ನನ್ನೇ ಹಾಕಿಕೊಂಡೆನು; ನಾನೇ ಈ ಸರ್ಪರಾಜನ ಬಾಯನ್ನು ತೆರೆದು ಚುಂಬಿಸಿದೆನು; ನನ್ನ ಕತ್ತಿಯನ್ನೇ ತೆಗೆದುಕೊಂಡು ನಿರ್ದಯನಾಗಿ ನನ್ನ ಮೇಲೆಯೇ ಚೆನ್ನಾಗಿ ಪ್ರಯೋಗಿಸಿದೆನು; ಮನೆಯಲ್ಲಿ ಮಲಗಿ ಅಹಹ! ಬಾಗಿಲಲ್ಲಿ ನಾನೇ ಬೆಂಕಿಯೊನ್ನಿಟ್ಟಿದೆನು.

ಕಣಮುಮದಲಭ್ಯಮಿಂತೆನೆ |
ಗುಣಮೆತ್ತಲುಮಕಟ ಜಣಮುಮೆಂತಾಶ್ವಾಸಂ ||೨೪||*

ದೇವ—ಮಹಾರಾಜನೇ, ಹಾಗಾದರೂ ಆಪತ್ತಲ್ಲಿ ಧೈರ್ಯವೊಂದೇ ಅವಲಂಬನವು.

ರಾಜ—ಕಂ|| ಎನಗೇನಾತ್ಮನಿರಾಕೃತ |
ನೆನಿಪಂಗಂತಪ್ಪಧೈರ್ಯದಿಂದಿಂದು ಫಲಂ ||
ಅನುಗೊಳಿಸುಗುಂ ಪ್ರತೀಪಮ |
ದನೆ ಈ ಯಸದಳದ ವಿಪ್ರಯೋಗಕ್ಕೆ ಗಡಾ ||೨೫|| †

(ಶವದ ದೋಲೆಯನ್ನು ನೋಡಿದಂತೆ ನಟಿಸಿ ಉನ್ಮಾದದಿಂದ) ದೇವಿ, ದೇವಿ.

ಕಂ|| ಎಮುತಿದು ಕಾದಲ್ಮೆಗಡಲ್ |
ಸುಮುಖಿಯಗಾಧಂ ತಟಕ್ಕೆ ನೀನಃ ಸೇದ್ದೌ ||
ಸಮನಿಸಿತೆನಗೆನೆ ನಡುವೋ |
ಳವಿಂತಂ ಮುಳ್ಗುಳಿಯೆ ಮೋಹಮೇನುಮನರಿಯೆಂ ||೨೬|| ‡

ಹಾ! ದೇವಿ;

ವೃ|| ಇಂದೇ ಸಿನ್ನತನಂಗಮಂಗಳಕಲಾಸ್ಥಾಯಿತ್ವಮುಂ ಪೋದುದ | ಲ್ಲಿಂದೇ ದಾರುಣಮೆನ್ನತಿಂತು ಹೃದಯಂ ನಿರ್ದಾರಿತಂ ಕೆನ್ನಮಾ || ಯ್ತಿಂದೇ ಪೋಯ್ತುಮುದಾರಮೇದುರಮುದಂ ಸೌಭಾಗ್ಯಸೌಖ್ಯಂ ನನ | ತ್ತಿಂದೇ ವಿಪ್ರಹತ ಶ್ರೀಯಿಂತು ಪೊರೆಗಾದೆಂ ಜೀವಲೋಕಕ್ಕಮಾಂ ||೨೭|| §

---

* ಆ ಕಮಲೇಕ್ಷಣೆಯಲ್ಲಿ ವೈಗುಣ್ಯವು ಅಣುವಾದರೂ ಇದ್ದ ಪಕ್ಷದಲ್ಲಿ ಅಯ್ಯೋ, ಅವಳಲ್ಲಿ ಸಿಕ್ಕಿಕೊಂಡಿರುವ ಈ ಮನಸ್ಸು ಹೇಗೆ ಸಡಿಲವಾಗದೆ ಇರುವುದು? ಆದರೆ ಅಂತಹ ಗುಣವು ಕ್ಷಣಮಾತ್ರವಾದರೂ ಇನ್ನೆಲ್ಲಿಂದಲೂ ದೊರೆಯದಿರಲು ಅಹಹ, ಕ್ಷಣಮಾತ್ರವಾದರೂ ಹೇಗೆ ಆಶ್ವಾಸಹೊಂದಲಿ?

† ಆತ್ಮನಿರಾಕೃತನಾದ ನನಗೆ ಈಗ ಅಂತಹ ಧೈರ್ಯದಿಂದ ಏನುತಾನೇ ಆಗಬೇಕು. ಅದು ಮಾಡುವುದೆಲ್ಲವೂ ಈ ವಿಧದ ವಿಪ್ರಯೋಗಕ್ಕೆ ಪ್ರತೀಪವಾದುದೇ.

‡ ಎಲೌ! ಸುಮುಖಿ. ನಮ್ಮಿಬ್ಬರ ಸ್ನೇಹಸಮುದ್ರವು ಅಗಾಧವಾದುದು, ನೀನು ಸಾಧು, ಅದರ ಪಾರಕ್ಕೆ ಸೇರಿಬಿಟ್ಟೆ. ನನಗಾದರೆ ಮಧ್ಯದಲ್ಲಿ ಪತನವು ಸಂಭವಿಸಿತು, ಮುಳುಗಿ ಇಲ್ಲಿ ಮೋಹವೊಂದಲ್ಲದೆ ಇನ್ನೇನನ್ನೂ ಕಾಣೆನು.

§ ಮಂಗಳಕರವಾದ ವಸ್ತುಗಳಿಗೆ ನೀನು ಸಂಭಾರಭೂಮಿಯಾಗಿದ್ದುದೂ ಈಗಲೇ ಕೊನೆಗಂಡಿತು; ನನ್ನ ಹೃದಯವೂ ಈ ರೀತಿಯಲ್ಲಿ ದಾರುಣವಾಗಿ ಭೇದಿಸಲ್ಪಟ್ಟುದೂ ಈಗಲೇ

(ತೆರೆಯಲ್ಲಿ)

ದೇವನೇ? ದೇವಿಗೆ ಅಗ್ನಿಪ್ರದಾನಮಾಡಲು ಅಪ್ಪಣೆಯಾಗಲಿ.

ರಾಜ—(ಕೇಳಿ) ಅಯ್ಯೋ ಹಾಗೆ ಮಾಡಹೋಗಕೂಡದು. (ಕೋಪದಿಂದ) ಏನು, ನಾನು ಪ್ರತಿಷೇಧಿಸಿದುದನ್ನು ಆಚರಿಸಲು ಬಂಧುಗಳು ಯತ್ನಿಸಿದರು?

ದೇವ—ಮಹಾರಾಜನೇ, ಈ ವಿಧದ ನಿರ್ಬಂಧವಿಂದ ಇನ್ನೇನು?

ರಾಜ—ನಿರ್ಬಂಧಮಾಡುವುದೇ ಸರಿ,

ಕಂ|| ಇನಿಯಳ ತನುವಂ ವಿಧಿಹತ |
ನೆನುತೆನ್ನಂ ನೂಂಕುತಗ್ನಿಗಿಂದೀವೊಡೆ ನೀಂ ||
ಮನಕೆನತರಿದಾಗಲದಿಂ |
ತೆನುತರಿಯಿರ್ ತಡೆವೊಡೆಯ್ದಿದೇನಿಂತು ಧ್ರುವಂ ||೨೮|| *

(ಎಂದು ಉನ್ಮತ್ತನಾದಂತೆ ಚಿತಾಭಿಮುಖನಾಗಿ ಓಡುವನು.)

ದೇವ—ಅಯ್ಯೋ, ಹೀಗಾಯಿತೇ! ನಾವೂ ಹೋಗಿ ಮಹಾರಾಜನನ್ನು ಹಿಡಿದುಕೊಳ್ಳುವ.

(ಎಂದೆಲ್ಲರೂ ಹೋಗುವರು.)

ಇಂತು ದ್ವಿತೀಯಾಂಕಂ.



ಆಯ್ತು; ಕಡೆಯಿಲ್ಲದೆ ಉಬ್ಬಿದ ಮದವುಳ್ಳವನಾಗಿ ಸೌಭಾಗ್ಯ ಸೌಖ್ಯವೊಂದನ್ನೇ ನಾನು ಅನುಭವಿಸುತ್ತಿದ್ದುದು ಈಗಲೇ ಕೊನೆಗಂಡಿತು; ಈಗಲೇ ಪ್ರತಿಹತಭಾಗ್ಯನಾಗಿ ಜೀವಲೋಕದಿಂದಲೂ ನಾನು ಬಹಿರ್ಗತನಾಗಿರುವೆನು.

* ವಿಧಿಹತನೆಂದು ನನ್ನನ್ನು ಈ ಪ್ರಕಾರವಾಗಿ ನಿರಾಕರಿಸಿ ನೀವು ನನ್ನ ಪ್ರಿಯೆಯ ದೇಹವನ್ನು ಬೆಂಕಿಗೆ ಹಾಕುವುದಾದರೆ ಇದೋ ಮನಸ್ಸನ್ನು ಹಿಡಿಯಲಸಾಧ್ಯವಾಗಲು ನಿರೋಧಿಸುವುದಕ್ಕೇ ಖಂಡಿತವಾಗಿಯೂ ನಾನು ಬರುತ್ತಿರುವೆನೆಂದು ತಿಳಿಯಿರಿ.

|| ಶ್ರೀಃ ||

# ತೃತೀಯಾಂಕಂ.



(ಅನಂತರದಲ್ಲಿ ಕಂಚುಕಿ ಪ್ರವೇಶಿಸುವನು).

ಕಂಚುಕಿ—(ಜಾರಿಬೀಳುವುದನ್ನಭಿನಯಿಸಿ), ಅಯ್ಯಯ್ಯೋ, ಜರೆಯಿಂದಲೂ, ಶೋಕದಿಂದಲೂ ಅಭಿಭೂತನಾದ ನನಗೆ ಊರುಗೋಲೂ ಅವಲಂಬನವಾಗುವುದಿಲ್ಲವಲ್ಲಾ ಏಕೆಂದರೆ,

ಕಂ|| ಜರೆಯಿಂ ಸಾಜದ ತನುವಿದು |
ಪರಾಹತಂ ಮತ್ತಮೊಡೆಯನಳಲಿಂ ವಿಧುತಂ ||
ನಿರುಕಿಸಿ ವಿಕಾರ ಸಂಭ್ರಮ |
ದಿರವದರಾ ಬಳಿಕೆ ವಿಕಲಮೆಂತವಲಂಬಂ ||೨೯|| *

(ಪ್ರಯಾಸದಿಂದೆದ್ದು) ಮಹಾರಾಜನ ಶೋಕವನ್ನು ಹೋಗಲಾಡಿಸುವೆನೆಂದು ಈ ಯೋಗಿ ಮಾಡಿದ ಪ್ರತಿಜ್ಞೆಯನ್ನು ಅಮಾತ್ಯನಲ್ಲಿ ವಿಜ್ಞಾಪಿಸುವೆನು. (ಪರಿಕ್ರಮಿಸಿ, ನೋಡಿ) ಇದೋ ಅಮಾತ್ಯನೇ ಬಂದನು.

(ಬಳಿಕ ದೇವತಿಲಕನು ಪ್ರವೇಶಿಸುವನು).

ದೇವತಿಲಕನು—(ಆಲೋಚನೆಯೊಡಗೂಡಿ).

ಕಂ|| ಕೊನೆಯಹಜಿದಾಯ್ತೆ ಸುಸ್ಥಿರ |
ಮನುರೂಪಂ ಪ್ರಣಯಗುಣದ ಗಂಟಿಗೆ ಬಳೆದಾ ||
ತನುವಳಿವ ಸೌಖ್ಯರತನಿಂ |
ದೆನಲಿವನೇಂ ಬಟ್ಟೆ ತೀರ್ಚ್ಜೆ ಹಾ ಇವನಳಲಂ ||೩೦|| †

---

* ಸಹಜವಾದ ಜರೆ ಪರಾಭವಿಸಿರುವುದು; ಮತ್ತೆ ಒಡೆಯನ ದುಃಖದಿಂದ ನಡುಗುವುದು; ಮೇಲೆ ಅವನ ಆ ವಿಕಾರಸಂಭ್ರಮದಿಂದ ವಿಕಲವಾಗಿರುವುದು; ಹೀಗಿರುವುದಕ್ಕೆ ಅವಲಂಬನವು ಹೇಗೆ ಆಗುವುದು !

† ಅಹಹ, ಪರಸ್ಪರವಾಗಿ ಬಳೆದ ಇವರ ಪ್ರಣಯಗುಣಗ್ರಂಥಿಗೆ ಇಂತಹ ಪರಿಣಾಮವಾಯ್ತೇ ? ಈಗ ಮರಣಸೌಖ್ಯವೊಂದನ್ನೇ ಬಯಸುವ ಇವನ ದುಃಖವನ್ನು ಹಾ ! ಹೋಗಲಾಡಿಸುವುದಕ್ಕೇನಾದರೂ ಮಾರ್ಗವಿರುವುದೇ ?

ಕಂಚು—(ಬಳಿಗೆ ಬಂದು) ಅಮಾತ್ಯನೇ, ಈ ಯೋಗೀಶ್ವರನು-ಮಹಾರಾಜನ ಶೋಕವನ್ನು ನಾನು ಹೋಗಲಾಡಿಸುವೆನು-ಎಂದು ಪ್ರತಿಜ್ಞೆಮಾಡುವನು.

ದೇವ—(ಆನಂದದಿಂದ) ಹಾಗೇ ಆಗಲಿ. ಮಹಾರಾಜನು ಇಲ್ಲಿರಲಿ, ಯೋಗಿಯ ಬಳಿಗೆ ಹೋಗಿ ನೋಡುವೆನು

(ಎಂದು ಹೊರಟುಹೋಗುವರು).

|| ಇಂತು ವಿಷ್ಕಂಭಕಂ ||

(ಅನಂತರದಲ್ಲಿ ಉನ್ಮತ್ತನಾದ ರಾಜನು ಪ್ರವೇಶಿಸುವನು.)

ರಾಜ—ಎಲೌ ಕಾಂತೆ! ಕಾಶೀರಾಜನಂದಿನಿ.

ವೃ|| ನುಡಿಗೇಳ್ದೊಪನ ಮೃತ್ಯುವಾರ್ತೆಯ ಬಿಡಲ್ ಪ್ರಾಣಂಗಳಂ ನೀಂ ಗಡಿಂ | ತಿಡಿದತ್ತಿಂಡಲೆ ಪೆಣ್ಗಳೊಳ್ಜಸಮದಾ ಮೂಲೋಕದೋಳೆತ್ತಲುಂ || ಬಿಡದಿರ್ಪೆನೆನಲಕ್ಕಟಕ್ಕಟದರಿಂದೀದೇಹಮಂ ಶೋಚ್ಯಮಾಂ | ಕಡುಘೋಷಿಪ್ಪ ಪಕೀರ್ತಿಭೇರಿ ಯುವಲಾ ವಾರ್ಯಂ ಮಹತ್ತುಂತು ತಾಂ ||೩೧|| *

ನನ್ನ ಪ್ರತ್ಯಾಶೆಯಾದ ಇದೊಂದೇ ಸಾಧುತರವಾದುದು. ಇವಳನ್ನು ತೊಡೆಯಮೇಲೆ ಹಾಕಿಕೊಂಡು ಸತ್ತರೆ, ಇವಳನ್ನೇ ಅನುಧ್ಯಾನಮಾಡುವ ಯೋಗದಿಂದ ಜನ್ಮಾಂತರದಲ್ಲಿಯೂ ಇವಳ ಒಡಗೂಡಿರುವೆನು.

(ತೆರೆಯಲ್ಲಿ)

"ಅಯ್ಯೋ, ಬೋಕಿಯೇ ಎಲ್ಲಿ ಹೋದೆ? ಅಯ್ಯೋ, ದೈವವೇ, ನನಗೆ ಅತಿ ಪ್ರತಿಕೂಲನಾಗಿ ನನ್ನನ್ನು ಪರಿತ್ಯಜಿಸಿ, ನನ್ನ ಬೋಕಿಯನ್ನು ಹಾಳುಮಾಡಿದೆಯಾ?"

(ಎಂದು ವಿಕಲಸ್ವರದಿಂದ ಅಳುವ ಧ್ವನಿಯಾಗುವುದು).

ರಾಜ—(ಕೇಳಿ) ಇದು ಯಾರದೋ ಆರ್ತನಾದವು. ಇದು ಯಾರದೋ

---

* ನಿನ್ನ ಪ್ರಣಯಕ್ಕೆ ಪಾತ್ರನಾಗಿದ್ದವನು ಮೃತಿಹೊಂದಿದನೆಂಬ ವೃತ್ತಾಂತವನ್ನು ಕೇಳುವುದೂ ನೀನು ಪ್ರಾಣವನ್ನು ಬಿಟ್ಟೆ ಅಹಾ! ಈ ವಿಷಯದಲ್ಲಿ ಸ್ತ್ರೀಯರ ಯಶಸ್ಸು ಮೂರು ಲೋಕಗಳನ್ನೂ ತುಂಬಿ ಮೇಲಕ್ಕೆ ಬಂದಿರುವುದು. ಆದುದರಿಂದ ನಾನು ಈ ದೇಹವನ್ನು ಬಿಡದಿದ್ದರೆ ಅಯ್ಯೋ. ಅಯ್ಯೋ, ಎಷ್ಟು ಶೋಚ್ಯವಾಗುವುದು? ತರುಣರ ದೊಡ್ಡದಾದ ಅಪಕೀರ್ತಿ ಭೇರಿಯನ್ನು ತಡೆವುದು ಹೇಗೆ?

ನನ್ನ ಹಾಗೆಯೇ ಅತಿಶೋಕೋಪಹತನಾದ ಒಬ್ಬನದಾಗಿರಬೇಕು. ಇರಲಿ, ಹೋಗಿ ನೋಡುವೆನು.

(ಎಂದು ಪರಿಕ್ರಮಿಸುವನು).

(ಪರಿಜನರು ಅನುಸರಿಸುವರು).

ರಾಜ—(ನೋಡಿ) ಇದೇನು, ಈ ಯೋಗಿ ಮುರಿದುಹೋದ ಸ್ಥಾಲಿಯನ್ನು ಕುರಿತು ದುಃಖಪಟ್ಟು ಬೀಳುತ್ತಿರುವನು! ಇರಲಿ, ಇವನನ್ನು ಆಶ್ವಾಸಗೊಳಿಸುವೆನು

(ಅನಂತರದಲ್ಲಿ ಯಥಾನಿರ್ದಿಷ್ಟನಾದ ಯೋಗಿ ಪ್ರವೇಶಿಸುವನು.)

ಯೋಗಿ—ಅಯ್ಯೋ, ಜೋಕಿಯೇ—(ಇತ್ಯಾದಿಯಾಗಿ ಮೇಲಣ ಮಾತನ್ನು ಪಠಿಸಿ ರೋದಿಸುವನು).

ರಾಜ—ಯೋಗಿಯೇ, ಸಮಾಶ್ವಾಸಹೊಂದು.

ಯೋಗಿ—(ನಿಟ್ಟುಸಿರನ್ನು ಬಿಟ್ಟು) ಅಯ್ಯೋ, ದೂರದೇಶಗಳನ್ನು ಪರಿಭ್ರಮಿಸುವುದರಲ್ಲಿ ನನಗೆ ಸಹಚಾರಿಯಾಗಿ ಅನೇಕ ಗುಣಗಳಿಂದ ನನ್ನ ಪ್ರೀತಿಗೆ ಪಾತ್ರವಾಗಿದ್ದ ಜೋಕಿ ಮುರಿದುಹೋಯಿತು; ಇನ್ನು ನನಗೆ ಆಶ್ವಾಸನೆಂತಹದು?

ರಾಜ—(ಕರುಣದಿಂದ ತನ್ನಲ್ಲಿ)

ಆರ್ಯಾವೃ|| ಎನಿತಲ್ಪಮಾದೊಡೇನದು |
ಮನಕಾಗಲ್ ಪ್ರೀಯಮಳಿಯೆ ವಸ್ತುವದಾರ್ ||
ಜನರಳರದೆನ್ನವಂದಿಗ |
ರಿನಿತಾಪದಮೆಯ್ದೆ ಪಿರಿದಿನ್ನೇಂ ||೩೨|| *

ಆದರೂ ಯೋಗಿಗೆ ಬೋಧೆಬರುವಂತೆ ಮಾಡುವೆನು.—(ಪ್ರಕಾಶವಾಗಿ) ಯೋಗಿಯೇ, ಇದು ನಷ್ಟವಾಗಿ ಹೋದರೆ ಏನು ಮುಳುಗಿಹೋಯಿತೆಂದು ಹೀಗೆ ಪರಿತಾಪಗೊಳ್ಳುವೆ?

ಯೋಗಿ—(ಕಣ್ಣೀರುಕರೆದು) ಯಾರಪ್ಪಾ, ನೀವು, ನಿಷ್ಠುರರು ಹೀಗೆ ಹೇಳುವಿರಿ? ಒಂದುವೇಳೆ, ನೀವು ಇದರ ಗುಣಗಳನ್ನು ಅರಿತವರಲ್ಲವೋ ಏನೋ?

---

* ಪ್ರಿಯವಾದ ವಸ್ತು ಎಷ್ಟು ಅಲ್ಪವಾದುದಾದರೂ ಅದಕ್ಕೇನಾದರೂ ಅಪಾಯವು ಬಂದರೆ ಯಾರು ಅಳುವುದಿಲ್ಲ? ಹೀಗಾದ ಮೇಲೆ ಇಂತಹ ಆಪತ್ತಲ್ಲಿ ನನ್ನಂತಹರ ಮಾತೇನು ಹೇಳಬೇಕು?

ರಾಜ—ಅದೇನಪ್ಪಾ, ಇದರ ಗುಣಗಳು ?

ಯೋಗಿ—ಅಯ್ಯೋ, ಎಷ್ಟೆಂದು ಗಣಿಸಲಾಗುವುದು ? ಆದರೂ ಕೆಲವನ್ನಾದರೂ ಗಣಿಸುವೆನು.

ವೃ|| ಇಡಲಾಯ್ದಾಯ್ದು ಕರೀಷಮಂ ಜ್ವಲನಮಂ ಸಾರ್ಚ್ಚಲ್ ತರಲ್
ನೀರ್ಗಳಂ | ಪಿಡಿಯಲ್ಕಂ ಚರಿಪಂದು ಭಿಕ್ಷೆಯನದಂ ಕಾಲಕ್ಕೆ ರಕ್ಷಿಪ್ಪೊಡಂ ||
ಅಡಲುಂ ಮುಚ್ಚಲು ಮಾಂಟಲುಂ ಗಡುಣಲುಂ ಪಾತ್ರಂ ಮಲಂಗಲ್ಕೆ ಕಾ |
ಳುಡೆಯುಂ ತಾನಹಹಪ್ಪೊಡಿದ್ದುದು ಚಿರಂ ಚಿಂತಾಮಣಿಪ್ರಖ್ಯಮುಂ ||೩೩||*

ರಾಜ—ಅದು ಹಾಗೇ ಎನ್ನುವ.

ಆರ್ಯಾ ವೃ|| ಗುಣಮಿನಿತೆನುತ್ತೆ ಪ್ರಿಯದೋ |
ಳೆಣಿಸಲ್ ವಸ್ತುವೊಳದಾರ್ಗ್ಗಡುಜ್ಜುಗಿಪರ್ ||
ಪ್ರಣಯಮೆ ಕುಡುಗುಮದೆಲ್ಲಮ |
ನಣಮವರೊಳೆ ಸುಖಬೀಜಂಗಳ್ ||೩೪|| †

ಆದರೂ ವಸ್ತು ನಷ್ಟವಾಗಿ ಹೋಗಿ ಪ್ರತೀಕಾರವು ಅಶಕ್ಯವಾಗಲು ಅನುತಾಪಪಟ್ಟೇನು ?

ಯೋಗಿ—ಇದರ ದೃಢತ್ವವನ್ನು ಪರೀಕ್ಷಿಸ ಪ್ರವರ್ತಿಸಿ, ನಾನೇ ಇದನ್ನು ಕೆಡಹಲು, ಒಡೆದುಹೋಯಿತಲ್ಲಾ ಎಂದು ಸಂತಾಪವು ಬಲುವಾಗಿರುವುದು.

ರಾಜ—(ಖೇದದಿಂದ) ಪ್ರಿಯವಸ್ತು ನಮ್ಮಿಂದಲೇ ನಾಶಿಸಲ್ಪಡಲು ಸಂತಾಪಕ್ಕೆ ವಿಶ್ರಾಂತಿಯಿರುವುದಿಲ್ಲ. ಏಕೆಂದರೆ,

ಕಂ|| ಗುರಿಯೆಂತಾನುಮಳಲ್ಗಾ |
ಗಿರಲಾವುದಪಂ ಪ್ರಮೋಷಿಕುಂ ನೋಡೆ ಮನಂ ||

* ಕಾಡುಬೆರಣೆಗಳನ್ನು ಆಯ್ದು ತುಂಬಿಕೊಳ್ಳುವುದಕ್ಕೂ, ಬೆಂಕಿಯನ್ನು ತರುವುದಕ್ಕೂ ಬಾರಿಬಾರಿಗೂ ನೀರನ್ನು ತರುವುದಕ್ಕೂ, ಭಿಕ್ಷೆಗೆ ಹೋದಾಗ ಹಾಕಿಸಿಕೊಳ್ಳುವುದಕ್ಕೂ, ತಂದ ಭಿಕ್ಷೆಯನ್ನು ರಕ್ಷಿಸುವುದಕ್ಕೂ, ಮುಚ್ಚುವುದಕ್ಕೂ, ಬೇಯಿಸುವುದಕ್ಕೂ, ತಿನ್ನುವುದಕ್ಕೂ, ಕುಡಿವುದಕ್ಕೂ ಮತ್ತೆ ಕೆಲವೆಡೆಗಳಲ್ಲಿ ತಲೆಯ ಕೆಳಗಿಟ್ಟುಕೊಂಡು ಮಲಗಿಕೊಳ್ಳುವುದಕ್ಕೂ, ಚಿರಕಾಲದಿಂದ ನಮ್ಮ ಪಾತ್ರೆಯಾಗಿ, ಅಹಹ ಚಿಂತಾಮಣಿಯಾಗಿತ್ತು.

† ವಸ್ತು ತನಗೆ ಪ್ರಿಯವಾದರೆ ಯಾವನು ತಾನೇ ಅದರ ಗುಣಗಳನ್ನು ಎಣಿಸಹೋಗುವನು ! ಸ್ನೇಹವೇ ಅದಕ್ಕೆಲ್ಲವನ್ನೂ ಕೊಡುವುದು, ಅಲ್ಲಿಯೇ ಸುಖದ ಹೇತುಗಳಿರುವುದು.

ತರಿದದನೆ ತಾನೆ ವಸ್ತುವ |
ನಿರದಾವಂ ಜೀವಿಪಂ ಹತಾಶಂ ಜಣಮುಂ ||೩೪|| †

(ಎಂದು ಕಣ್ಣೀರುಸುರಿಸಿ, ಹಾಗೆಯೇ ಧೈರ್ಯವನ್ನು ತಂದುಕೊಂಡು) ಎಲೈ ಯೋಗಿಯೇ ? ಹಾಗೇ ಆದರೂ,

ಆ|| ಭಗವತಿ ಭವಿತವ್ಯತೆಯ |
ಕ್ಕುಗೆ ಮೇಣ್ ಪ್ರಿಯಮಕ್ಕುಗಪ್ರಿಯಂ ವಿಷಯಂ ||
ಉಗಿಯಿಪೊಡಂ ನೆರೆಯಿಪೊಡಂ |
ತಗುಗುಂ ಬಳಿಕಂ ನೃದೋಷಮದೇಂ ||೩೫|| *

(ಯೋಗಿ ಅದನ್ನು ಕಿವಿಗೇ ಹಾಕಿಕೊಳ್ಳದೆ ಆ ಕಪ್ಪರೆಯ ಚೂರುಗಳನ್ನು ಎದೆಯಮೇಲಿಟ್ಟುಕೊಂಡು ರೋದಿಸುವನು).

ರಾಜ—ಎಲೈ ಯೋಗಿಯೇ ? ರೋದನವನ್ನು ಬಿಡು. ಇದಕ್ಕೂ ಅಧಿಕತರವಾದ ಮಣ್ಣಿನದೋ ಬೆಳ್ಳಿಯದೋ ಚಿನ್ನದದೋ ನಿನಗೆ ಬೇಕಾದ ಸ್ಥಾಲಿಯನ್ನು ಕೊಡುವೆನು.

ಯೋಗಿ—(ಎರಡು ಕಿವಿಗಳನ್ನೂ ಮುಚ್ಚಿಕೊಂಡು) ಶಾಂತಂಪಾಪಂ ; ಶಾಂತಂಪಾಪಂ ! ಚಿನ್ನವೊದಲಾದುದರ ಬೋಕಿಯ ಹೆಸರೇ ಬೇಡ. ಮಣ್ಣಿನ ಬೋಕಿಯೇ ಹೋಗಿಬಿಟ್ಟು ಇಂತಹ ಅನರ್ಥಕ್ಕೆ ಕಾರಣವಾಯಿತು. ಇನ್ನು ಚಿನ್ನವೊದಲಾದುದರದೇನು ಹೇಳಬೇಕು ? ಮತ್ತೆ,

ವೃ|| ಭಯನಕ್ರಂಗಳಕೋಟಿ ತುಂಬಿರೆ ಮದಗ್ರಾಹಂಗಳುಜ್ಜೃಂಭಿಸಲ್ | ಪಯಆವರ್ತತರಂಗಬೃಂದವೊದವಲ್ ದ್ವೇಷಾಸ್ಥಿರತ್ವಂಗಳಾ || ಕ್ಷಯಿಸಿರ್ಪೆನ್ನತಿದರ್ಥಮಲ್ಪಮುಮೆನಲ್ ತಾನೀದುರರ್ಥಾಬ್ಧಿಯಾ | ಯ್ತುಯನಂಕಾಣೆನಹಾ ಪ್ರವೃದ್ಧವಿಪದಕ್ಕಿಂತಳ್ದಿಸಾಂ ಬೀಳುತುಂ ||೩೬|| ‡

---

† ಯಾವ ವಸ್ತುಗೆ ಕಾರಣವೇನೇ ಆದರೂ ಕಷ್ಟವೇನಾದರೂ ಬಂದರೆ ಅದನ್ನು ನೋಡಿದುದರಿಂದಲೇ ಮನಸ್ಸು ಪ್ರಮೋಹವನ್ನು ಹೊಂದುವುದೋ ಅದನ್ನು, ತಾನಾಗಿಯೇ ನಾಶಮಾಡಿದುದನ್ನು, ಕಂಡು ಯಾವ ಹತಾಶನು ತಾನೇ ಕ್ಷಣವಾದರೂ ಜೀವಿಸುವನು ?

* ಭವಿತವ್ಯತೆಯೆಂಬ ದೇವತೆ ವಸ್ತು ಪ್ರಿಯವಾಗಲೀ, ಅಪ್ರಿಯವಾಗಲೀ ಘಟನೆಮಾಡುವುದಕ್ಕೂ ವಿಘಟನೆಮಾಡುವುದಕ್ಕೂ ಪ್ರಾಭವವುಳ್ಳುದು ಇದರಲ್ಲಿ ಪುರುಷದೋಷವೇನು ?

‡ ನನ್ನ ಅರ್ಥವು ಚಿಕ್ಕದಾದರೂ ಮದವೆಂಬ ಗ್ರಾಹ (ಒಂದು ಜಾತಿಯ ಮೊಸಳೆ) ಗಳ ಉದ್ಭ್ರಾಂತಿಯಿಂದ ಕೂಡಿ ಭಯವೆಂಬ ಮಕರ (ಇನ್ನೊಂದು ಜಾತಿಯ ಮೊಸಳೆ)

ಮತ್ತೆಯೂ "ಇದಕ್ಕೂ ಅಧಿಕತರವಾದ" ಎಂದು ನೀನು ಅತಥ್ಯವಾದ ಮಾತನ್ನು ಹೇಳುವೆ. ಇದು ಎಷ್ಟು ಸುಸ್ಪರ್ಶವಾಗಿತ್ತು, ಎಂತಹ ರಮಣೀಯಾಕಾರವುಳ್ಳದು, ಎಷ್ಟು ಗಂಭೀರವಾಗಿಯೂ, ವಿಸ್ತಾರವಾಗಿಯೂ ಇತ್ತು, ಎಷ್ಟು ಚೆನ್ನಾದ ದೃಢಪ್ರಕೃತಿಯುಳ್ಳದು, ಇದರ ಹಾಗಿರುವ ಬೇರೊಂದು ವಸ್ತು ಎಲ್ಲಿಂದ ಬರುವುದು ?

ರಾಜ—(ನಿರ್ವೇದದೊಡಗೂಡಿ)

ಕಂ|| ಗುಣಮಧಿಕಾಧಿಕಮಿತರಮು |
ಗಣಿತಂ ವಸ್ತುತತಿ ಸುಲಭಮತಿಶಯಮಿರೆಯುಂ ||
ಪ್ರಣಯಂ ಮನಕೇನಾನುಮ |
ನಣಮಳಲಂ ತಪ್ಪ್ ವಸ್ತುವಂ ಸಮನಿಸುಗುಂ ||೩೮|| *

ಯೋಗಿಯೇ,

ಕಂ|| ಎನತಿದಿದಧಿಕತರಪ್ರಿಯ |
ಮೆನಿಪಲ್ಲಂ ಬುದ್ಧಿ ವಸ್ತು ಸೌಂದರ್ಯಭವಂ ||
ಜನಯಿಪುದು ನೇಹಮೆ ದಲಿದ |
ನನಪೇಕ್ಷಿಸಿ ಗುಣಮನದರೊಳಾ ಮೋಹಧನಂ ||೩೯|| †

ಯೋಗಿ—ಎಲೈ ಮುಗ್ಧನೇ ? ಇದು ಬರಿಯ ಸ್ನೇಹವೇ ಹೇಗಾಗುವುದು ? ಶರೀರ ಸಂವರ್ಧನವೂ ಇದಿದ್ದರೆ ಅಲ್ಲವೆ ನಡೆವುದು ?

ರಾಜ—ಹಾಗೆ ಈ ಪಾತ್ರವು ಈಗ ನಷ್ಟವಾಗದೆ ಹೋಗಿದ್ದರೂ ಇನ್ನೆಷ್ಟು ಕಾಲವು ತಾನೇ ಇರುತ್ತಿತ್ತು ?

---

ಕೋಟಿಯಾ ವ್ಯತಿಕರವುಳ್ಳುದಾಗಿ ಸ್ಫುರಿಸುವ ದ್ವೇಷವೆಂಬ ಸುರುಳಿಗಳು ತುಂಬಿ ತರಳತ್ವವೆಂಬ ತರಂಗಸಮೂಹಕ್ಕೆ ಸ್ಥಾನವಾಗಿ ಇರುವ ದುರರ್ಥಸಮುದ್ರವಾಯಿತು; ನಾನು ಇತ್ತ ದೊಡ್ಡ ಆಪತ್ತಿಗೆ ಬಿದ್ದು ಮುಳುಗಿರುವೆನು.

* ಗುಣದಿಂದ ಅಧಿಕಾಧಿಕವಾಗಿಯೂ ಸುಲಭವಾಗಿ ದೊರೆವುದಾಗಿಯೂ ಇರುವ ವಸ್ತುಗಳು ನೂರಾರು ಬೇಕಾದ ಹಾಗೆ ಇರಲಿ, ಪ್ರಣಯವು ಯಾವುದೋ ಒಂದು ವಸ್ತುವನ್ನು ಮನಸ್ಸಿಗೆ ಅಧಿಕವಾದ ಪರಿತಾಪವನ್ನು ಮಾಡುವಂತೆ ಮಾಡುವುದು.

† ಈ ವಸ್ತು ನನಗೆ ಅಧಿಕತರಪ್ರಿಯವೆಂಬ ಬುದ್ಧಿ, ವಸ್ತುಸೌಂದರ್ಯದಿಂದ ಹುಟ್ಟಿದುದಲ್ಲ. ಸ್ನೇಹವೆಂಬ ಮೋಹಧನವು ಈ ವಿಷಯದಲ್ಲಿ ಗುಣವನ್ನು ಅಪೇಕ್ಷಿಸದೆಯೇ ಪ್ರವರ್ತಿಸುವುದು.

ವೃ|| ಇರೆಕಲ್ಪಕೋಟಿಗಿದು ಕಲ್ಪಶತಕ್ಕೆ ಕಲ್ಪ |
ಕ್ಕರೆಗಾನುಮಂತದಲೆ! ಕಲ್ಪದ ದಾರ್ಢ್ಯದಿಂದಂ ||
ಕಿರಿದಾನುಮಳ್ವುದು ನಿನತ್ತಲೆ ಯುಕ್ತಮಂದೀ |
ಯೆರಳ್ಮೂರು ವಾಸರಕೆ ಪೋಪುದರ್ಕೇಕೆ ಶೋಕಂ ||೪೦|| *

ಶರೀರಸಂವರ್ಧಕವಸ್ತು ಹೋಯಿತೆಂದೂ ಅಳತಕ್ಕುದಲ್ಲ. ಏಕೆಂದರೆ,

ವೃ|| ಹಿತವಿಾವಸ್ತುಗಡೆಮ್ಮ ದೇಹಕಿದಗಲ್ದತ್ತೆಮ್ಮನೆಂಬೆಲ್ಲವಿಾ | ಯತಿಖೇದಕ್ಕೆಡೆ ಚಿತ್ತವಿಭ್ರಮಮೆ ಹಾ ದೇಹಾಭಿಮಾನೈಕಜಂ || ಹತವಿಾದೇಹಮೆ ಹೇತುವಾಪದವಿವರ್ಕೆಲ್ಲಂ ಕರಕ್ಕಂಬು ಸೋಂ | ಕಿತೆನಲ್ ದ್ವಿತ್ರಪಲಂ ಭ್ರಮಂ ದಿಟಮಿದೆಂದಾಶ್ಲೇಷಮಲ್ತಿನ್ನದೇಂ ||೪೧|| ‡

ಯೋಗಿ—ಹಾಗಾದರೂ ವಿಪ್ರಿಯವೆಂದು ಬಿಟ್ಟು ಇದು ಪ್ರಿಯವೆಂದು ಲೋಕವು ಏತಕ್ಕೆ ಅನುಸರಿಸುವುದು ?

ರಾಜ—ವಿಭ್ರಮದಿಂದ. ನೋಡು,

ವೃ|| ಎಂತಾಪಾತದೆ ಸುಷ್ಠುವಾಗೆ ವಿಷಯಂ ಪ್ರೇಯಂ ಗಡಕ್ಕುಂ ಮುದ | ಕ್ಕಂತೆಯ್ದಲ್ ಹತಿ ಯತ್ತುಂತ್ತಲದರ್ಕೇ ದುಃಖಕ್ಕೆ ಪರ್ಯಸ್ತದೊಳ್ || ಮಂ ತಾವಿಪ್ರಿಯಮುಂ ಒಳಿಕ್ಕೆ ಸುಖದೊಳ್ ಸಂತಾಪದಂ ದುಃಖದೊಳ್ | ಸಂತೋಷವಹಮಪ್ರಿಯಂ ಪ್ರಿಯಮುಮೇಂ ಮೋಹೈಕಜಂಸರ್ವಮುಂ ||೪೨||*

* ಅದು ಒಂದು ಕೋಟಿಕಲ್ಪವಾದರೂ, ಇಲ್ಲ ನೂರು ಕಲ್ಪವಾದರೂ, ಬೇಡ ಒಂದು ಕಲ್ಪವಾದರೂ, ಹೋಗಲಿ, ಅರ್ಧಕಲ್ಪವಾದರೂ ಸ್ಥಿರವಾಗಿರುತ್ತಿದ್ದ ಪಕ್ಷದಲ್ಲಿ, ಅದರ ವಿಷಯದಲ್ಲಿ ನಿನ್ನ ದುಃಖವು ಕೊಂಚವಾದರೂ ಯುಕ್ತವಾಗುತ್ತಿತ್ತು. ಎರಡು ದಿನದಲ್ಲೋ ಮೂರು ದಿನದಲ್ಲೋ ಹೋಗುವುದಕ್ಕೆ ಅಳುವುದೇಕೆ ?

‡ ದೇಹಕ್ಕೆ ಈ ವಸ್ತುಗಳು ಹಿತವಾದುವು, ಇವು ನಮ್ಮನ್ನು ಬಿಟ್ಟು ಹೋದುವು, ಹೀಗೆ ನಿಮಗೆ ಸಂತಾಪವನ್ನು ಮಾಡುವ ಇದೆಲ್ಲವೂ ಕೂಡ, ಅಯ್ಯೋ. ಆ ಚಿತ್ತವಿಭ್ರಮವು. ಈ ಹಾಳದೇಹವೇ ಎಲ್ಲಾ ಆಪತ್ತುಗಳಿಗೂ ಕಾರಣವಾಗುವುದು. ಯಥಾರ್ಥವಾದರೆ. ಕಯ್ಗೆ ನೀರು ಅಂಟಿಕೊಂಡಿದ್ದರೆ ಅದೆಷ್ಟು ಹೊತ್ತಿರುವುದು ? ಆ ಆಶ್ಲೇಷವು ಎರಡು ಮೂರು ವಿಗಳಿಗೆಯ ಮೇಲಿರುವುದೇ ? ಇದೆಲ್ಲವೂ ಭ್ರಮೆಯಲ್ಲದೆ ಇನ್ನೇನು ?

* ವಸ್ತು ಪ್ರಿಯವಾದುದಾದರೆ ಅದರ ಆಪಾತದ ಸೌಷ್ಠವದಿಂದ ಯಾವ ಪ್ರಕಾರವಾಗಿ ಜನರು ಹರ್ಷದಿಂದ ಉಬ್ಬುವರೋ ಅದಕ್ಕೇನಾದರೂ ವಿಪತ್ತು ಬಂದರೆ ಆಪ್ರಕಾರವಾಗಿಯೇ ಅಲ್ಲಲ್ಲಿ (ಆ ಆ ವಿಪತ್ತಿಗೆ ಅನುಗುಣವಾಗಿ) ಪರ್ಯವಸಾನದಲ್ಲಿ ದುಃಖದಿಂದ ತೊಳಲುವರು.

ಯೋಗಿ—ಇದು ಚೆನ್ನಾಗಿ ತಿಳಿದಿರುವುದು. ಆದರೂ ತಪ್ತವಾಗುತ್ತಿರುವ ನನ್ನ ಹೃದಯವನ್ನು ತಿರುಗಿಸುವ ಪ್ರತೀಕಾರವಿಲ್ಲ.

ರಾಜ—ವಸ್ತುವಿಚಾರವಿದ್ದರೂ ಅದೂ ದುಃಖವನ್ನು ಹೋಗಲಾಡಿಸಲಾರದುದಾದಮೇಲೆ, ಇನ್ನೇನು ತಾನೇ ಪ್ರತೀಕಾರವು ?

ಯೋಗಿ—ಏಕೆ, ಇಂತಹ ಸಂದರ್ಭಗಳಲ್ಲಿ ಮರಣವು ಪ್ರತೀಕಾರವಾಗುವುದಿಲ್ಲವೇ ? ಏಕೆಂದರೆ, ಇದನ್ನು ಎದೆಯ ಮೇಲಿಟ್ಟುಕೊಂಡು ಸಾವೇನಾದರೆ ಜನ್ಮಾಂತರದಲ್ಲಿಯೂ ಇದರೊಡಗೂಡಿರುವೆನು.

ರಾಜ—(ನಕ್ಕು) ಇದೇ ಈ ಸಂಸಾರಮೂಲವಾದ ಮಹಾ ಮೋಹವೆನಿಸುವುದು. ಆದರದೇ ಈ ವಿಧದ ದುಃಖಮಯಗಳಾದ ದುರ್ವಿಲಸಿತಗಳು.

ಯೋಗಿ—(ಗಟ್ಟಿಯಾಗಿ ನಕ್ಕು)

ಆ॥ ಪರಿಗೀತಮಲೆ ಸುಧೀತ್ವಂ |
ಪರೋಪದೇಶಕ್ಕದೆಗ್ಗನಾ ಯೆನುತುಂ ॥
ನೆರೆದಿರೆ ಕಳ್ತಲೆ ಸುತ್ತಲ್ |
ಪೆರರ್ಗಾ ಬೆಳಗೀವ ದೀವಿಗೆವೊಲ್ ॥೪೩॥ *

(ರಾಜನು ವೈಲಕ್ಷ್ಯದಿಂದ ಅಧೋಮುಖನಾಗಿ ಚಿಂತಿಸುತ್ತ ನಿಲ್ಲುವನು).

ಯೋಗಿ—ರಾಜನೇ, ಏನು ಚಿಂತಿಸುತ್ತಿರುವುದು ?

ರಾಜ—ಪೂಜ್ಯರೇ, ಇನ್ನೇನು ತಾನೇ ? ನನ್ನ ಮಾತುಗಳಿಂದಲೇ ನನಗೆ ಉಪದೇಶಮಾಡಿ ಪೂಜ್ಯರಾದ ತಮ್ಮಿಂದ ನನ್ನ ಶೋಕವು ಹೋಗಲಾಡಿಸಲ್ಪಟ್ಟಿತು.

ಯೋಗಿ—ಹ್ಞಾ, ಹ್ಞಾ, ಭಗವತಿಯಾದ ವಿಂಧ್ಯವಾಸಿನಿಯ ದರ್ಶನಮಾಡಿಕೊಂಡು ನಾನು ಹಿಂದುರುಗಿ ಬರುತ್ತಿರಲು ನೀನು ಹೀಗಾಗಿರುವೆಯೆಂದು ತಿಳಿದು ಸತ್ತ್ವಸುಲಭವಾದ ಕರುಣಭಾವದಿಂದ ನಿನಗೀಪ್ರಬೋಧವು ಉನ್ಮೀಲಿತವಾಗುವಂತೆ ಮಾಡಿದುದಾಯಿತು !

---

ವ್ಯತ್ಯಾಸದಿಂದಲೋ ಎಂದರೆ, ವಸ್ತು ವಿಪ್ರಿಯವೇ ಆದುದಾದರೂ ನಮ್ಮ ಸುಖದಲ್ಲಿ ಸಂತಾಪವನ್ನು ಕೊಡುವುದು, ದುಃಖದಲ್ಲಿ ಸಂತೋಷವನ್ನು ತರುವುದು. ಹೀಗಿರಲು ಯಾವುದು ಪ್ರಿಯವು, ಯಾವುದು ಅಪ್ರಿಯವು ! ಎಲ್ಲವೂ ಮೋಹಜನ್ಯವು.

* ಮೂಢನು ಪರೋಪದೇಶಮಾಡುವುದರಲ್ಲಿ ಪಂಡಿತನೆಂದು ಇದನ್ನೇ ಅಲ್ಲವೆ ಹಾಡಿ ಹಾಡಿ ಹೇಳುವರು. ತಾನು ಅಂಧಕಾರದಿಂದ ಸುತ್ತಲ್ಪಟ್ಟಿದ್ದರೂ ಇನ್ನೊಬ್ಬಂಗೆ ಬೆಳಕನ್ನು ಕೊಡುವ ದೀಪದ ಹಾಗೆ ಇದು.

ರಾಜ—ಹಾಗಾದರೆ ಪೂಜ್ಯರಾದ ತಾವು ಶ್ರೀಗೋರಕ್ಷನಾಥಪಾದರೇ ಅಲ್ಲವೇ ?

ಯೋಗಿ—ಅಹುದು.

ರಾಜ—ಪೂಜ್ಯರೇ ! ಈ ಅಂಧಕೂಪದಿಂದ ನಾನು ಸಾಧುರೀತಿಯಿಂದ ಉದ್ಧೃತನಾದೆನು.

(ಎಂದು ಕಾಲಿಗೆ ಬೀಳುವನು).

(ಗೋರಕ್ಷನಾಥನು ಎತ್ತುವನು).

ರಾಜ—(ಬದ್ಧಾಂಜಲಿಯಾಗಿ) ಇನ್ನು ಮುಂದೆ ನಾನು ಇಂತಹ ಅನರ್ಥವನ್ನು ತಂದುಕೊಳ್ಳದಿರುವುದಕ್ಕೆ ಏನು ಬೇಕೋ ಅದನ್ನು ಗುರುಗಳು ಉಪದೇಶಿಸಬೇಕು.

ಯೋಗಿ—ಉಚಿತವು, ಉತ್ಕಟದುಃಖಾಭಿಷಂಗವೆಂಬ ನೇಗಿಲಿಂದ ಉಳಲ್ಪಟ್ಟು, ವಸ್ತುವಿವೇಕವೆಂಬ ರಸವನ್ನು ಹುಯ್ದಿರುವ ನಿನ್ನ ಚಿತ್ತಭೂಮಿ, ವಿಜ್ಞಾನವೆಂಬ ಬೀಜವನ್ನು ಬಿತ್ತುವುದಕ್ಕೆ ಯೋಗ್ಯವಾಗಿರುವುದು.

ವೃ|| ಜನಿಕುಂ ಸಂಸೃತಿಯೆಲ್ಲಮುಂ ನಿಜಮನಸ್ಸಂಕಲ್ಪದಿಂ ತಾಂ ತವ |
ಮರ್ಗನೆ ಯಜ್ಞಾನಕೆ ತನ್ನಿವೃತ್ತಿಗೆಳಸಲ್ಕುತ್ಪಾಟಿಸಾಮೂಲಮುಂ || ಅನವಚ್ಛಿನ್ನ
ಮನೇಹದಿಂ ದೆಸೆಯಿನುಂ ಸಚ್ಚಿನ್ಮಯಂ ಬ್ರಹ್ಮಮೊಂ | ದನೆ ಈ ತತ್ತ್ವಮನೆಯ್ದೆ
ಚಿಂತಿಸೆ ಪರಾನಂದಂ ಲಭಿಕ್ಕುಂ ಪದಂ ||೪೪|| *

ರಾಜ—ಪೂಜ್ಯರೇ ! ಇದೋ ಆಶೆಯೆಂಬ ಇತರ ಪರ್ಯಾಯವುಳ್ಳ ಸಂಕಲ್ಪಗಳೆಲ್ಲವೂ ನನ್ನಿಂದ ಬಿಡಲ್ಪಟ್ಟುವು. ಸಾಧು, ಸಾಧು.

ವೃ|| ನನೆಪಿಂ ಪಬ್ಬಿರ್ಗಕುಮೆಲ್ಲದಿಕ್ಕಿಗೆ ತನತ್ತಾಮೋದದಿಂ ಮೋಹಮುಂ |
ತನತಾಸ್ವಾದಿಸೆಪಣ್ಗಳಂ ನಿಪತನಕ್ಕಕ್ಕುಂ ಗಡಾ ಕಾರಣಂ || ವನವೃದ್ಧಂ ವಿಷ

* ಸಂಕಲ್ಪದಿಂದ ಸಂಸಾರವೆಲ್ಲವೂ ಹುಟ್ಟುವುದು; ಈ ಸಂಸಾರವು ವಿಶೇಷವಾದ ಅಜ್ಞಾನಕ್ಕೆ ಉತ್ಪತ್ತಿ ಭೂಮಿಯಾಗಿರುವುದು. ಈ ಸಂಸಾರದಿಂದ ನಿವೃತ್ತಿಹೊಂದಲು ಇಚ್ಛಿಸುವೆಯಾದರೆ ಅದರ ಬೇರನ್ನೇ ಕಿತ್ತುಹಾಕಿಬಿಡು. ಯಾವುದು ಕಾಲದಿಂದಲೂ, ದಿಕ್ಕಿಂದಲೂ ಅವಚ್ಛಿನ್ನವಾಗದೆ ಇರುವುದೋ ಆ ಸಚ್ಚಿನ್ಮಯವಾದ ಬ್ರಹ್ಮವಾಚ್ಯವಾದ ತತ್ತ್ವವು ಒಂದೇ ತತ್ತ್ವವು. ಇದನ್ನು ಚೆನ್ನಾಗಿ ಮನನಮಾಡು, ಪರಾನಂದಪದವನ್ನು ಹೊಂದುವೆ.

ವಲ್ಲಿಯೊಡ್ಡಿನ ವೊಲಿಪ್ಪಿರ್ಪ ಯಾಸೆಯೊಡ್ಡಂ ಚಿರ | ಕ್ಕೆನಲಿತ್ತಲ್ ಜಯಿಸಿಪ್ಪೆರ್ನಿಂ
ದಹಹದಿಂ ಮೋಕ್ಷಂ ಗಡಿಕ್ಕುರ್ಕೆ ಪರಂ ||೪೫|| †

ಇನ್ನು ಆ ತತ್ವಚಿಂತನದ ಕ್ರಮವು ಹೇಗೆ ?

ಯೋಗಿ ಕಂ|| ಎಸಸುಂ ವಿಷಯವ್ರಜದಿಂ |
ಮನಮನದಾಹರಿಸಿ ಶೂನ್ಯದೊಳ್ ಧಾರಯಿಸಲ್ ||
ನಿನಗೆ ಸ್ವಯಮಾನಂದದ |
ಜನಯಿಸುಗುಂ ಸ್ವಪ್ರಕಾಶದಾತ್ಮದ ಲಾಭಂ ||೪೬|| ‡

ರಾಜ—ಹಾಗಾದರೆ ಆಗಲಿ. ಇಲ್ಲಿಗೆ ಉಪವನವು ಸನ್ನಿಹಿತವಾಗಿಯೇ ಇರುವುದು. ಅಲ್ಲಿ ಒಂದು ವಿಜನಸ್ಥಾನಕ್ಕೆ ಹೋಗಿ ಇದನ್ನು ಚಿಂತಿಸುವೆನು.

(ಎಂದೆಲ್ಲರೂ ಹೋಗುವರು)

ಇಂತು ತೃತೀಯಾಂಕಂ.

---

† ಮುಕುಳನವು ಮೊದಲ್ಗೊಂಡು ಆ ಮೋದದಿಂದ ದಿಕ್ಕು ದಿಕ್ಕಿಗೂ ಮೋಹವನ್ನು ಪ್ರಸರಿಸುತ್ತ ತನ್ನ ಹಣ್ಣುಗಳ ರುಚಿಯಿಂದ ನಿಪತನವನ್ನೇ ಮಾಡುತ್ತ ಇದ್ದ ನಿರಾಸಾದಗಳಾದ ಈ ಆಸೆಗಳು ವನದಲ್ಲಿ ಬೆಳೆದ ವಿಷಲತೆಗಳಂತೆ ಈಗಲೀಗ ನನ್ನನ್ನು ಬಿಟ್ಟು ಹೋದುವು. ಇನ್ನು ಮೇಲೆ ಉಳಿದುದಾದರೆ ಮೋಕ್ಷವು

‡ ಮನಸ್ಸನ್ನು ವಿಷಯಗಳಿಂದ ಚೆನ್ನಾಗಿ ಎಳೆದು ಶೂನ್ಯದಲ್ಲಿ ನಿಲ್ಲಿಸು. ಸ್ವಯಮಾನಂದವೂ ಸ್ವಪ್ರಕಾಶವೂ ಆದ ಆತ್ಮನನ್ನು ಪಡೆವೆ.

|| ಶ್ರೀಃ ||

## ಚತುರ್ಥಾಂಕಂ.

(ಅನಂತರದಲ್ಲಿ ದೇವತಿಲಕನು* ಪ್ರವೇಶಿಸುವನು).

ದೇವತಿಲಕನು—(ಆನಂದದಿಂದ) ಈ ಯೋಗೀಶ್ವರನು ಮಹಾರಾಜನನ್ನು ಸ್ಮಶಾನದಿಂದ ಉಪವನಕ್ಕೆ ಕರೆತಂದನೆಂಬುದು ಬಹು ಉಪಕಾರವಾಗಿರುವುದು. ಆದುದರಿಂದ ನಾನೂ ಅಲ್ಲಿಗೆ ಹೋಗುವೆನು. (ಎಂದು ಪರಿಕ್ರಮಿಸಿ ಮುಂದೆ ನೋಡಿ) ಇದೇನು ಯೋಗೀಶ್ವರನೊಡನೆ ಕುಳಿತು ಮಹಾರಾಜನು ಧ್ಯಾನಾಸಕ್ತನಾಗಿರುವನು. ನಿಗ್ರಹಿಸಲ್ಪಡುತ್ತಿರುವ ಮಹಾ ಶೋಕದ ಅಲೆಗಳು ಮಹಾರಾಜನ ಬಹಿರಿಂದ್ರಿಯಗಳನ್ನು ನಿಷ್ಪ್ರಕಾಶವಾಗುವಂತೆ ಮರೆಮಾಡುತ್ತಿರಬಹುದಲ್ಲವೇ ? ಒಂದುವೇಳೆ ಅದು ಹೇಗೆತಾನೇ ಆಗುವುದು ?

ಕಂ|| ಅಳಲಿಡಿದುರೆ ಕಾಳ್ಗಿಚ್ಚಿನ | 
ಬಳೆದಾ ದೀಪಕವಿಭಾವಮಾಂತುವನಾವಂ ||
ಕೊಳದೆಲ್ಲತ್ತಣಿನುಂ ಬಸ |
ಕೊಳನೀಷನ್ನಿವೃತಂ ಗಡಿಂದ್ರಿಯಚಯಮುಂ ||೪೭|| †

(ಅನಂತರದಲ್ಲಿ ಯಥಾನಿರ್ದಿಷ್ಟನಾದ ರಾಜನೂ ಯೋಗಿಯೂ ಪ್ರವೇಶಿಸುವರು.)

ರಾಜ—(ಧ್ಯಾನಾವಸಾನವನ್ನು ನಟಿಸುವನು; ಬಳಿಕ ಸಾತ್ತ್ವಿಕವಿಕಾರ

---

* ಟಿಪ್ಪಣಿ—ಈ ದೇವತಿಲಕನು ಮಹತ್ತರಕನೆಂದು ಹಿಂದೆ ಸೂಚಿತವಾಗಿರುವುದಷ್ಟೆ ? ಪೂರ್ವದಲ್ಲಿ ರಾಜರ ಬಳಿಯಲ್ಲಿ ಏಳೆಂಟು ಮಂದಿ ಮಂತ್ರಿಗಳಿರುತ್ತಿದ್ದರು. ಅವರಲ್ಲಿ ಕೆಲವರು ಮಂತ್ರಾಲೋಚನೆಯಲ್ಲಿ ಸಹಾಯಕರು (Councillors) ಅಂತಹರಿಗೆ ಮಂತ್ರಿಗಳೆಂದೂ ಅಮಾತ್ಯರೆಂದೂ ರೂಢವಾದ ಹೆಸರು ಇನ್ನು ಕೆಲವರು ಕಾರ್ಯದಲ್ಲಿ ಸಹಾಯಕರು (Secretaries); ಪ್ರಧಾನ (Chief Secretary); ಮಹತ್ತರಕ (Chamberlain), ಇತ್ಯಾದಿಗಳೆಲ್ಲರೂ ಈ ವರ್ಗಕ್ಕೆ ಸೇರಿದವರು. ಮಹತ್ತರಕನನ್ನು ಈಗಳಿನ ಅರಮನೆ ಬಕ್ಷಿಗೂ ದರ್ಬಾರುಬಕ್ಷಿಗೂ ಹೋಲಿಸಬಹುದು.

† ಮೊದಲೇ ಅತಿವೃದ್ಧವಾದ ದಾವಾಗ್ನಿಯನ್ನನುಕರಿಸುವ ದೀಪಕವಿಭಾವಕ್ಕೊಳಗಾಗಿರುವುದು; ಮೇಲೆ ಶೋಕವು ಸೇರಿರುವುದು; ಇಂತಹ ಇಂದ್ರಿಯಗಳನ್ನು ಎಲ್ಲಾಕಡೆಯಿಂದಲೂ ಅವರೋಧಿಸಿದಲ್ಲದೆ ಸ್ವಲ್ಪವಾದರೂ ನಿವೃತ್ತಿ ಹೊಂದಿದವನು ಯಾವನುತಾನೇ ಇರುವನು ?

ವನ್ನು ಸೂಚಿಸಿ ಆನಂದದಿಂದ). ಪೂಜ್ಯರೇ! ಒಂದಾನೊಂದು ವಿಜ್ಞಾನಸುಖಾ ಸ್ವಾದವು ಆವಿರ್ಭವಿಸುತ್ತಿರುವುದು.

ಯೋಗಿ—ಅಭ್ಯಾಸದಿಂದ ಪೂರ್ಣಾನಂದತ್ವವು ಹುಟ್ಟಿ ಸ್ಥಾಯಿಯಾಗು ವುದು. ಅಷ್ಟಾಂಗವುಳ್ಳ ಹಠಯೋಗವನ್ನೂ ಕಾಲವನ್ನರಿತು ನಾನು ಉಪದೇಶಿ ಸುವೆನು.

ರಾಜ—ಪೂಜ್ಯರೇ! ಈ ವರವು ಪ್ರಾಪ್ತವಾಯಿತು (ಎಂದು ಪಾದಗಳಿಗೆ ಬೀಳುವನು.)

ದೇವ—(ಆನಂದದಿಂದ) ಈ ಯೋಗೀಶ್ವರನಿಂದ ಹೋಗಲಾಡಿಸಲ್ಪಟ್ಟ ಶೋಕವುಳ್ಳವನಾಗಿ ಮಹಾರಾಜನು ಆನಂದದಿಂದ ಕೂಡಿದಂತೆ ಕಾಣಬರುವನು. ಇನ್ನು ಹಾಗಾದರೆ ಅವಸರವೂ ಪ್ರಾಪ್ತವಾಯಿತು (ಎಂದು ಹತ್ತಿರಕ್ಕೆ ಬಂದು) ದೇವನು ದೇವಿಯ ವಹ್ನಿಸಂಸ್ಕಾರಕ್ಕೆ ಆಜ್ಞೆ ಕೊಡಲಿ.

(ರಾಜನು ಮೌನದಿಂದಿರುವನು).

ದೇವ—ದೇವನೇ! ಪ್ರತ್ಯುತ್ತರವು ಕೊಡಲ್ಪಡಲಿ.

ರಾಜ—(ನಕ್ಕು) ಆ ಕಾಲವೆಲ್ಲಾ ಹೊರಟುಹೋಯಿತು.

ಕಂ|| ಇರಲಾ ಮಮತ್ವಮೆಮ್ಮ |
ವ್ವರ ನೃಪಸಚಿವತ್ವಮಾದುವೇತರಿನೆನ್ನೊಳ್ ||
ಗುರು ಬೆಸಸೆ ಸರ್ವದರ್ಥದ |
ಬರೆ ಸಿದ್ಧಿ ಸಮೂಲವೋಡಿತಾ ವ್ಯಾಮೋಹಂ ||೪೮|| *

ಆದುದರಿಂದ ಇನ್ನು ಮೇಲೆ ಆಜ್ಞೆಮಾಡುವ ಭಾರವು ನಿಮ್ಮದೋ ನಿಮ್ಮ ರಾಜಕುಮಾರನದೋ ಆಗಬಹುದು.

ದೇವ—(ಯೋಗಿಯನ್ನು ಕುರಿತು) ಯೋಗೀಶ್ವರರೇ, ಇದೇನು ಮಾಡಿ ದಿರಿ? ಕಾಳಸರ್ಪದ ಕಚ್ಚಿಂದ ಚೇಳುಕಚ್ಚಿದ ದೋಷವನ್ನು ಹೋಗಲಾಡಿಸುವ ಇದು ಯುಕ್ತವಲ್ಲವಲ್ಲಾ.

* ಯಾತರಿಂದ ನನ್ನಲ್ಲಿ ಆ ಮಮತ್ವವೆಂಬುದಿತ್ತೋ, ಮತ್ತೆ ಯಾತರಿಂದ ನಾನು ದೊರೆ ನೀನು ಮಂತ್ರಿ ಎಂಬ ಭಾವನೆಯಿತ್ತೋ ನನಗೆ ಪೂಜ್ಯರಾದ ಗುರುಗಳ ಆಜ್ಞೆಯಿಂದ ಸರ್ವಾ ರ್ಥಸಿದ್ಧಿಗಳೂ ಲಬ್ಧವಾಗಲು ಆ ನನ್ನ ವ್ಯಾಮೋಹವು ಬೇರುಮುಟ್ಟ ನಾಶವಾಗಿ ಹೋಯಿತು

ಯೋಗಿ—ಮಂತ್ರಿಮಹತ್ತರನೇ ? ನನ್ನನ್ನು ನಿಂದಿಸಿ ಏನು ? ಶೋಕಸಲು ಭವಾದ ನಿರ್ವೇದದಿಂದ ರಾಜನನ್ನು ಹಿಂದಿರಿಗಿಸು; ನಾನೂ ನಿನಗೆ ಅನುವರ್ತಿಯಾಗುವೆನು.

ದೇವ—ಮಹಾರಾಜನೇ, ಇದೇನು ?

ಕಂದ|| ನವನೀತಸಂವಿದದಿದೊ |
ಪ್ಪುವ ಪಾಕಂ ದಾರುಣೌಜದಿಂ ನಾಡಲ್ಲಂ ||
ಸವಿ ಸೂಪಸಂವಲನ ಸಾ |
ಧುವೆನಲ್ಕಂ ಸಂವಿಧಾನಿತಂ ನೆಯ್ಯವೊಲೇಂ ||೪೯|| *

ರಾಜ—ಹೇಳಲಿಲ್ಲವೇ, ಆ ಕಾಲವು ಕಳೆದುಹೋಯಿತೆಂದು, ಈಗಲಾದರೆ.

ವೃ|| ಸುಡೆ ಪೆರ್ಬಾರ್ವ ಬಿಸಂಬೊಲೆನ್ನತೊಳಗಾ ದೋಷಜ್ವರಂ ದುಸ್ಸಹಂ| ಸಿಡಿಯಲ್ ಜ್ವಾಲೆ ಬಳಲ್ಕೆ ಪುಟ್ಟಲೆನಸುಂ ವೈಕಾರಿಕಂ ಮೂರ್ಛಿತಂ || ಜಡ ಜೀರ್ಣಾನ್ನರಸಪ್ರಯುಕ್ತವಿರತಂ ಯುಕ್ತಾತ್ಮಭಿಯುಕ್ತಾತ್ಮನುಂ | ಬಿಡೆನೇಂ ಪ್ರಾಜ್ಯಮೆನುತ್ತೆ ರಾಜ್ಯಮನಿದಂ ಸಕ್ಷೌದ್ರಮಾಜ್ಯಂಬೊಲಾಂ ||೫೦|| †

* ಭೂಪತಿಯೇ ದಾರುಣವಾದ (ರಾಜ್ಯಪಕ್ಷದಲ್ಲಿ, ಶತ್ರುಭೀಕರವಾದ; ಆಜ್ಯಪಕ್ಷದಲ್ಲಿ ಅತಿತೀಕ್ಷ್ಣವಾದ) ಓಜಸ್ಸಿನಿಂದ (ರಾ. ಶಸ್ತ್ರಪ್ರಯೋಗಚಾತುರ್ಯ; ಆ. ತಾಪ) ಸಂವಿಧಾನಮಾಡಿ (ರಾ. ಸಂದರ್ಭಗಳನ್ನು ತಂದೊಡ್ಡಿ; ಆ. ರಚನಾಕ್ರಮವನ್ನನುಸರಿಸಿ) ಸಾಧಿಸಲ್ಪಟ್ಟು ನವನೀತಸಂವಿದದ (ರಾ. ನವ ಹಿಂದೆ ಯಾರೂ ಕಾಣದಂತಹ ಅದ್ಭುತರೀತಿಯಿಂದ, ನೀತ–ನಡೆಯಿಸಲ್ಪಟ್ಟ, ಸಂವಿದದ–ಯುದ್ಧದ; ಆ. ನವನೀತ–ಬೆಣ್ಣೆಯ, ಸಂವಿದದ–ಅನುಕೂಲವಾದ) ಚಾರು (ಮನೋಹರ] ಪಾಕ (ರಾ. ಕಯ್ಗೆ ಬಂದ ಫಲ; ಆ. ಅಡುಗೆ) ವೂ ಆಗಿ ಸೂಪಸಂವಲನ [ರಾ. ಉತ್ತಮವಾದ ಉಪಸಂವಲನ-ರಾಜೋಪಕರಣ; ಆ. ತೋಯಿಗೆಹಾಕಿ ಕಲಸುವುದು] ಸಾಧು [ಉತ್ಕೃಷ್ಟ] ವೂ ಆದ ಈ ರಾಜ್ಯವು ಆಜ್ಯದಂತೆ ರುಚಿಸುವುದಿಲ್ಲವೇ?

† ದೋಷಪ್ರಕೋಪದಿಂದ ಜ್ವರವು ಹುಟ್ಟಿ ಒಳಗೇ ಸುಡುತ್ತ ಸಹಿಸುವುದಕ್ಕಾಗದ ಮಹಾಸರ್ಪದ ವಿಷದಂತಿದ್ದು, ಅದರ ಜ್ವಾಲೆ ಎಲ್ಲಾ ಕಡೆಗೂ ಸಿಡಿಯುತ್ತಿರಲು, ವಿಕಾರಜನಕವಾದ ಬಳಲಿಕೆ ಬಲುವಾಗಿ ಹುಟ್ಟಲಾಗಿ ಮೂರ್ಛಾವೇಶವನ್ನು ಹೊಂದಿದೆನು; ಭುಂಜಿಸಿದುದು ಜೀರ್ಣಿಸದೆ ಕೆಟ್ಟ ರಸಗಳು ದೇಹವನ್ನೆಲ್ಲಾ ವ್ಯಾಪಿಸಲಾಗಿ ವಿರತಿ ಸಂಭವಿಸಿತು; ಇಷ್ಟಾಗಲು ಯುಕ್ತವಸ್ತುವಲ್ಲಿ ಆತ್ಮವನ್ನು ಅಭಿಯೋಗಿಸಿದೆನು; ಇಂತಹ ನನಗೆ ರಾಜ್ಯವು ಮಧ್ವಭಿಘಾರಿತವಾದ ಆಜ್ಯದಂತಿರಲು ಅದು ಪ್ರಾಜ್ಯವೆನಿಸಿಕೊಂಡಮಟ್ಟಕ್ಕೇ ತ್ಯಾಜ್ಯವಲ್ಲವೆಂದರೇನು ?

ಟಿಪ್ಪಣಿ—ಮಧ್ವಭಿಘಾರಿತಾಜ್ಯವೆಂದರೆ, ಜೇನುತುಪ್ಪವನ್ನು ಹಾಕಿದ ತುಪ್ಪ: ತುಪ್ಪ ಜೇನುತುಪ್ಪಗಳ ಮಿಶ್ರಣವು ವಿಷವೆಂದು ವೈದ್ಯಶಾಸ್ತ್ರಜ್ಞರು ಹೇಳುವರು

ದೇವ—ಸಂಚಯಮಾಡಿರುವ ಇಷ್ಟೊಂದು ವಿತ್ತವಾದರೂ ನಿನ್ನ ಮನಸ್ಸನ್ನು ಆಕರ್ಷಿಸುವುದಿಲ್ಲವೇ ?

ರಾಜ—ಕಂ|| ಗಳಿಪುದು ಪರಾಸುಪೀಡನ |
ದುಳಿಯಿಪುದಾತ್ಮಾಸುಪೀಡನಂ ಸೈಸಸುವೇ ||
ಅಳಿವನಿತಳಲ್ವುದು ಬೀಯುದಿ |
ನಳಿಯಲ್ ಕೊಲ್ವುದಸುವನೆ ವಿಪತ್ತಿದು ವಿತ್ತಂ ||೫೧|| †

ದೇವ—ಅಯ್ಯೋ, ಇಷ್ಟಕ್ಕೆ ಬಂತೇ ? ಯಾರೊಬ್ಬರೂ ಬಯಸದ ಅಧನ್ಯವಾದ ನೈರ್ಧನ್ಯವನ್ನು ಬಹುಮಾನಿಸುವರೆ ?

ರಾಜ—ಕಂ|| ಕಿಡೆ ಚೋರಶಂಕೆ ನೃಪಭಯ |
ಮಡಂಗೆ ಖಲವೈರಮಳಿಯಲಾಳ್ಕ್ಮಳಿಯದಿರಲ್ ||
ಜಡಮಿರ್ಕ್ಕಧನತೆ ಯೆನಗಮು |
ಜಡಧನತೆಸೊಗಂ ತಟಿತ್ಸಮಂ ಬೇಳ್ಪರುಣಿಂ ||೫೨|| *

ದೇವ—ಮಹಾರಾಜನೇ, ಸುಖೋಪನತೆಯಾಗಿ ಸರ್ವಾಕಾರದಿಂದ ಹೃದಯಾವೋದಿನಿಯಾದ ಮೇದಿನಿಯನ್ನೇಕೆ ಕೀಳಾಗಿ ತಿಳಿವೆ ?

ರಾಜ—ನನ್ನನ್ನು ಮೇದಿನಿ ಬಹುಮಾನಿಸುತ್ತಿದ್ದ ಪಕ್ಷದಲ್ಲಿ ನಾನೂ ಮೇದಿನಿಯನ್ನು ಹೇಗೆ ಕೀಳಾಗಿ ಭಾವಿಸುತ್ತಿದ್ದೆನು ? ನೋಡು.

ವೃ|| ರತಿಗಾಗಲ್ ಬಲ್ಪು ರೂಪಂ ಕುಡುಗೆ ಖುಜುತೆಗಳ್ ತಾಣಮಾದೀರ್ಘಮೊಲ್ದಾ | ಪತಿಗಳ್ ಪೋಗಲ್ ದ್ರುತಂ ಮೇದಿನಿ ಮರೆದಿನಿಸುಂಕೂರ್ತ್ತರಂ ಬಿಟ್ಟರಂಬೋಲ್ || ಹಿತನಂ ಸೋಂಕುತ್ತುಮಂಕಸ್ಥನುಮನಳಿಗಿವಂ ಜಾಲ್ಮನೆಂ

† ಪರರಪ್ರಾಣವನ್ನು ಪೀಡಿಸಿ ಇದನ್ನು ಸಂಪಾದಿಸಬೇಕು; ತನ್ನ ಪ್ರಾಣವನ್ನು ಪೀಡಿಸಿಕೊಳ್ಳುತ್ತ ಇದನ್ನು ರಕ್ಷಿಸಬೇಕು; ಸ್ವಲ್ಪವೇನಾದರೂ ವ್ಯಯವಾದರೆ ಪ್ರಾಣಕ್ಕೇ ಕಷ್ಟವು ಬಂದಂತಾಗುವುದು; ನಷ್ಟವಾಯಿತೋ ಪ್ರಾಣವನ್ನೇ ಹಿಡಿದುಕೊಳ್ಳುವುದು; ವಿತ್ತವು ನಮಗೆ ಇಂತಹ ವಿಪತ್ತಾಗಿರುವುದು.

* ಕಳ್ಳರು ಕದ್ದುಕೊಂಡು ಹೋಗುವರೆಂಬ ಭಯವಿಲ್ಲ; ರಾಜರು ಗೆದ್ದು ತೆಗೆದುಕೊಂಡು ಹೋಗುವರೆಂಬ ಭಯವಿಲ್ಲ; ದುಷ್ಟರು ದ್ವೇಷಿಸುವರೆಂಬ ಭಯವಿಲ್ಲ; ಪರಿಜನರು ಅತೃಪ್ತಿಪಡುವರೆಂಬ ಭಯವಿಲ್ಲ; ಇಂತಹ ಅಧನ್ಯವಾದ ನೈರ್ಧನ್ಯವು ನನಗಿರಲಿ, ಧನ್ಯವೆನಿಸುವ ಧನಿತೆಯಾದರೆ ಮಿಂಚಂತೆ ಕ್ಷಣಿಕವಾದ ಸೌಖ್ಯವನ್ನು ಬಹುಮಾನಿಸುವ ನಿಮಗಿರಲಿ.

ದೆಯ್ದೆ ಲೋಗರ್ | ಕೃತಭಾವರ್ ನೂತ್ನನೂತ್ನರ್ ಪಿರಿದಸವಸದಿಂ ವೇಶ್ಯೆವೋಲೋಲಗಿಕ್ಕುಂ ||೫೩|| †

ಮತ್ತೆ

ವೃ|| ಬುವಿಕಾವಗ್ಗಿ¹ನಿಸಾನುಪಿಕ್ಕೆರ್ಸೆಯದೇಂ ದುರ್ಮೇಧೆ ವಲ್ಗನ್ಮಹಾ | ಶ್ವವಿತಾನೋಗ್ರಖುರಾವದಾರಕವಿಜೇತಂಗೆರ್ದು ವಿದ್ವೇಷಿಕುಂ || ಇವಳ್ಗೆಂದೀವೊಡಮೊಲ್ದುಭೋಂಕನಸುವಂ ಸಂಗ್ರಾಮದೊಳಾತನಾ | ತವೆಕೃತ್ತಂ ತನುವಿಂ ಸ್ರವಿಪ್ಪ ತಣಿಗುಂ ಕೆನ್ನೀರ್ಗ್ಳಿಂದಾಂತರಂ ||೫೪|| *

ದೇವ—ಮಹಾರಾಜನೇ, ಅನೇಕ ಜನ್ಮಗಳಿಂದ ಪುಣ್ಯವು ಉಪಾರ್ಜಿತವಾಗಲು ಅದರ ಪ್ರಭಾವದಿಂದ ಪ್ರಾಪ್ತವಾದ ರಾಜಪದವನ್ನು ಯಾರು ಪರಿತ್ಯಜಿಸುವರು ?

ರಾಜ—(ನಕ್ಕು)

ವೃ|| ನೃಪನೆಂದೇಂ ರುಜೆ ಬಾರದೇ ಕೆಲಕೆ ತದ್ದರ್ಪೋಷ್ಮದಾ ಭೀತಿಯಿಂ| ವಿಪದಂ ಶಂಕೆಯಿನೆಯ್ದದೇ ಪರಿಗುಮೇ ಮೇಣ್ ಶೋಕಮುತ್ತಾಪಿತಂ || ಆಪಕರ್ಷಿಪ್ಪನೆ ಕಾಲನೀಶ್ವರನೆನುತ್ತುಂ ಕ್ಷೋಭೆಯಿಂದಲ್ಪಮುಂ | ಸ್ವಪುರಕ್ಕುಯ್ವುದರೊಳದಿಂ ನೃಪಪದಂ ತಾನೇತರಿಂ ದುರ್ಮದಂ ||೫೫|| ‡

---

† ಲಾವಣ್ಯ, ಔದಾರ್ಯ, ವೀರ್ಯ, ಋಜುತ್ವ—ಇವುಗಳಿಂದ ರತಿಯನ್ನು ಉಂಟುಮಾಡಿದವರಾಗಿ ತನ್ನಲ್ಲಿ ದೀರ್ಘಕಾಲದಿಂದಲೂ ಅನುರಕ್ತರಾದ ಪತಿಗಳನ್ನು ಅವರು ಹೋದರೋ ಇಲ್ಲವೋ, ಈಷದ್ಭಕ್ತರೋ, ಅಪರಕ್ತರೋ ಆದವರನ್ನು ಹೇಗೋ ಹಾಗೆ ಮರೆತು, ಅಂಕಾರೂಢನಾಗಿದ್ದರೂ ದಯಿತನನ್ನು ಇವನು ಹೋಗಲೆಂದು ಗರ್ಹಿಸುತ್ತ, ಜನರು ಯಾರಾದರೂ ಪ್ರೇಮವನ್ನು ಹೊಂದಿ ಹೊಸಹೊಸತಾಗಿ ಬಂದರೆ ಈ ಮೇದಿನಿ ವೇಶ್ಯೆಯಂತೆ ಅವರೊಡನೆ ಆಮೋದಿಸುವಳು.

* ತನ್ನನ್ನು ರಕ್ಷಿಸಿದರೆಂದು ಭೂಮಿ ಸಂತೋಷಪಡದಿದ್ದರೆ ಬೇಡ. ಆದರೆ ಜಗ್ಗಿಹಾಕಿಕೊಂಡು ನಡೆದು ಬರುವ ಮಹಾಶ್ವಗಳ ಗೊರಸುಗಳಿಂದ ತನ್ನನ್ನು ಚೆನ್ನಾಗಿ ಕೊರೆವಂತೆ ಮಾಡುವ ವೀರನಮೇಲೆ ಒಲವರಕೆಹೊಂದಿ ಆ ರಾಜರಮೇಲೆ ವೈರವನ್ನೇಕೆ ತೋರಬೇಕು ? ಇವಳಿಗಾಗಿ [ಈ ಭೂಮಿಗಾಗಿ] ಯುದ್ಧದಲ್ಲಿ ತನಗೆಷ್ಟು ಅಭಿಮತವಾದುವಾದರೂ ಪ್ರಾಣಗಳನ್ನು ಆಕ್ಷಣವೇ ಬಿಡಹೋಗುವನಾದರೂ ಅವನ ದೇಹವು ಚೆನ್ನಾಗಿ ಕತ್ತರಿಸಲ್ಪಟ್ಟು ರಕ್ತವು ಹರಿಯುತ್ತಿರಲು ಅದನ್ನು ನೋಡಿ ಆಂತರವಾದ ಸಂತೋಷವನ್ನು ಪಡುವುದೇಕೆ ?

‡ ಏನು ? ರಾಜನೆಂದು ಅವನ ದರ್ಪದ ಉಷ್ಣಕ್ಕೆ ಹೆದರಿ ರೋಗಗಳು ಅವನ ಸಮೀಪಕ್ಕೆ ಓಡಿಬರುವುದನ್ನು ಬಿಡುವುವೇ ? ಸಂತಾಪದಿಂದ ದುಃಖಗಳು ಅವನನ್ನು ಬಿಟ್ಟು ಓಡಿ

ದೇವ—ಅಹಾ! ಕಷ್ಟ, ಕಷ್ಟ! ಇದೋ ಇಲ್ಲಿ ಬಂಧುಗಳು ರೋಧಿಸುತ್ತಿರುವರು; ಅವರನ್ನು ಪರಿತ್ಯಜಿಸುವ ಬಗೆ ಹೇಗೆ?

ರಾಜ—ಒಬ್ಬನು ಪರಲೋಕಪರಾಯಣನಾಗಲು ಆವನ ಬಂಧುಗಳು ಸಾಧುಗಳಾದರೆ ಆದಿಯಲ್ಲಲ್ಲದಿದ್ದರೆ ಪರಿಣಾಮದಲ್ಲಾದರೂ ಸಂತೋಷಪಟ್ಟೇ ಪಡುವರು. ಇತರರಾದರೆ.

ವೃ|| ಅಳಿವೊಳ್ ಪಲಮ್ಮೆರ್ ಮನದೊಳ್ ಸುಖಿಸುತ್ತುಮಳ್ವರ್| ಬಳೆಯಲ್ ತೆರಂ ವಿಮನಸರ್ಗ್ಗಡ ಪಾಡಿದಪ್ಪರ್ || ಪಳಿದಾಂತರಿಂ ವಿಹರಿಪರ್ ಸುಖದಿಂದೆ ಶ್ರೀಯೋ | ಳೊಳರಾರಮಿತ್ರರಿವರಪ್ಪೊಡೆ ಬಾಂಧವರ್ಕ್ಕಳ್ ||೫೭|| †

ದೇವ—ಮಹಾರಾಜನೇ, ಅದು ಹಾಗಾದರೆ ಆಮೇಲೆ ಅವರೇ ಆಗಲಿ, ಪರರೇ ಆಗಲಿ, ಈ ಭೂಮಿಯನ್ನು ಆಕ್ರಮಿಸಿಕೊಂಡರೆ ಆಗ ಹೇಗೆ ಸಹಿಸುವುದಕ್ಕೆ ಆಗುವುದು?

ರಾಜ—ವೃ|| ಇವರಪ್ಪರ್ ಜನಮೆನ್ನತಾನುಮಿವರಾ ಎಂಬೊಂದು ಮೂಢಾತ್ಮರಾ | ಕುವರಂ ಜ್ಞಾತಿ ಸಖಂ ಪರಂ ಗಡೆಸುತುಂ ಬುದ್ಧಿ ಭ್ರಮಿಕ್ಕುಂ ತೆರಂ || ತವಿದತ್ತೊರ್ಮೆ ಮನಕ್ಕಿದಂಟಿದ ಯೆನಲ್ವ್ಯಾಮೋಹಮಾರಾನುಮಾ | ಭುವಿಯಂ ನಮ್ಮನುಪೇಯುಮಂ ಕೊಳಲದೇಂ ಭಿನ್ನಂ ನಮುತ್ತಕ್ಕುಗುಂ||೫೭||*

---

ಹೋಗುವುವೇ? ಶಂಕೆಯಿಂದ ವಿಪತ್ತುಗಳು ಅವನ ಬಳಿಗೆ ಬಾರದಿರುವುವೇ? ಯಮನೂ ಕೂಡ ಇವನು ಮಹೇಶ್ವರನೆಂದು ಕ್ಷೋಭೆಹೊಂದಿ ಎಳೆದುಕೊಂಡು ಹೋಗುವುದರಲ್ಲಿ ಕೊಂಚವಾದರೂ ಶೈಥಿಲ್ಯವನ್ನು ತಾಳುವನೇ? ಹೀಗಿರಲು ಈ ರಾಜಪದವು ಏತರಿಂದ ದುರ್ಮದವೆನಿಸುವುದು?

ಟಿಪ್ಪಣಿ—ಮಾರ್ಕಂಡೇಯನನ್ನು ರಕ್ಷಿಸುವುದಕ್ಕೆ ಈಶ್ವರನು ಯಮನನ್ನು ಸೋಲಿಸಿದ ವೃತ್ತಾಂತವು ಇಲ್ಲಿ ಸಮುದ್ದಿಷ್ಟವಾಗಿರುವುದು.

† ನಾಶವು ಸಂಭವಿಸಿದರೆ ಮನಸ್ಸಲ್ಲಿ ಬಾರಿಬಾರಿಗೂ ಉಲ್ಲಾಸಪಡುತ್ತ (ಮೇಲೆ) ರೋದಿಸುವರು; ವೃದ್ಧಿ ಸಂಭವಿಸಿದರೆ ಅತ್ಯಂತವಾಗಿ ವಿಮನಾಯಮಾನರಾಗಿ (ಮೇಲೆ) ಗಾನ ಮಾಡುವರು; ಸಂಪತ್ತು ಬಂದರೆ ಒಳಗೆ ಕುತ್ಸಿಸುತ್ತ (ಮೇಲೆ) ಸುಖದಿಂದ ವಿಹರಿಸುವರು; ಇಂತಹರು ಬಂದುಗಳಾದರೆ ಇನ್ನು ಶತ್ರುಗಳೆನ್ನುವರು ಯಾರಿರುವರು?

* ಇವರು ನಮ್ಮವರು ಮತ್ತೆ ನಾನು ಇವರವನ್ನು ಎಂದು ಮೂಢಮನಸ್ಕರಾದವರಿಗೆ ಪುತ್ರ, ಮಿತ್ರ, ಜ್ಞಾತಿ, ಶತ್ರು ಎಂದು ಬುದ್ಧಿ ಮತ್ತೆ ಮತ್ತೆ ಪರಿಭ್ರಮೆಗೊಳ್ಳುತ್ತಿರುವುದು; ಈ ವ್ಯಾಮೋಹವು ಸಂಪೂರ್ಣವಾಗಿ ಹೊರಟುಹೋಯಿತೆಂದರೆ ಬಳಿಕ ಈ ವಸುಮತಿಯೇ

ದೇವ—(ಖೇದದಿಂದ)ಹಹಾ! ರಾಜಲಕ್ಷ್ಮಿಯೇ, ನೀನು ನಿರ್ಭಾಗ್ಯೆಯಾದೆ!

ರಾಜ—ದುರರ್ಥಾನುಬಂಧಿನಿಯಾದ ಇವಳು ನಿರ್ಭಾಗ್ಯೆಯಲ್ಲದೆ ಇನ್ನೇನು? ಕೇಳು.

ವೃ|| ಒಡನಾಂತಾ ಕಟುಕಾಲಕೂಟಗುಣಮಂ ನೀರಕ್ಷರದ್ಧರ್ಮಮಂ | ಬಡಬಾಗ್ನ್ಯುಷ್ಮ್ಯಮನಬ್ಧಿಯಿಂ ಚಲನಮಂ ಶ್ರೀಯೂರ್ಮಿಯಾ ಪುಟ್ಟಿದಳ್ || ಉಡುರಾಡ್ದ್ರಷ್ಟೃದೃಶಾಪ್ರಮೋದಕತೆಯಂ ಸ್ವರ್ಭೂಜದಾನಿತ್ವಮಂ | ಕಡುಪಾಪಿಷ್ಠೆ ಗಡಿಲ್ಲಿಮುಟ್ಟಲುಮದೇಂ ಪೀಯೂಷಮಾಧುರ್ಯಮಂ ||೫೮|| ‡

ಮತ್ತೆ

ವೃ|| ಉರುಳ್ದಂ ತಾಂ ನಹುಷಂ ದ್ಯುರಾಜ್ಯದುಡುಪಂ ಕೂರ್ತಂ ಗುರುಸ್ತ್ರೀಯನಿಂ | ದಿರನೋಳ್ದಂ ಮುನಿಪತ್ನಿಯಂ ಬಲಿಯಧೋಲೋಕಸ್ಥನಾದಂ ದೆಡಂ || ಚಿರಮುಳ್ದಲ್ಲದೆ ಮತ್ತೆ ಪೇರಲೆಗಳೊಳ್ ಸಂಸಾರಮೆಂಬಬ್ಧಿಯಾ | ಸಿರಿಯಂ ಗೆಯ್ದಿವಳಂ ನಿಜಾಂಕಚರಿಯಂ ಸೇರ್ದಿರ್ಪ್ಪರಾರ್ ಪಾರಮಂ ||೫೯||*

ದೇವ—ಹಾಗಾದರೆ ಪರಲೋಕಕ್ಕೆ ಹಿತವನ್ನು ಮಾಡುವ ದೇವತೆಗಳನ್ನು ತತ್ಪರತೆಯಿಂದ ಆರಾಧಿಸುತ್ತ ರಾಜ್ಯಲಕ್ಷ್ಮಿ ಸದರ್ಥಾನುಬಂಧಿನಿಯಾಗುವಂತೆ ಮಾಡುವುದಾಗಲಿ.

ರಾಜ—ಸಚ್ಚಿದ್ಬೋಧಮಾತ್ರದಿಂದ ಅರ್ಚನೀಯನಾದ ಭಗವಂತನಾದ ನಾರಾಯಣನು ಇರಲು ಇತರ ದೇವತೆಗಳನ್ನು ಆರಾಧಿಸಿ ಆಗಬೇಕಾದ್ದೇನು? ಹೆಚ್ಚು ಮಾತೇಕೆ,

---

ನಮಗೆ ಅನುಪೇಯವಾಗುವುದು, ಆಗ ಅದನ್ನು ಯಾವನೆಂದರೆ ಅವನು ಪಡೆಯಬಹುದು, ನಮ್ಮಿಂದ ಕತ್ತರಿಸಿ ತೆಗೆದುಕೊಂಡು ಹೋದುದು ಅಲ್ಲೀನೂ ಇಲ್ಲವಲ್ಲಾ.

‡ ಈ ಪಾಪೀಯಸಿಯಾದ ಲಕ್ಷ್ಮಿ, ಸಮುದ್ರದಿಂದ ಕಾಲಕೂಟದ ಕಟುತ್ವವನ್ನೂ ನೀರಕ್ಷರದ್ರೂಪತ್ವವನ್ನೂ, ಬಡಬಾಗ್ನಿಯ ಉಷ್ಣತ್ವವನ್ನೂ, ತರಂಗದ ಚಲನವನ್ನೂ ಒಡನೆ ಕೊಂಡೇಕೆ ಹುಟ್ಟಿದಳು? ಅಮೃತದ ಮಧುರತ್ವವನ್ನೂ, ಕಲ್ಪವೃಕ್ಷದ ತ್ಯಾಗಿತ್ವವನ್ನೂ ಕಡೆಗೆ ನೋಡುವರ ಕಣ್ಣಿಗೆ ಆಹ್ಲಾದವನ್ನು ಮಾಡುವ ಚಂದ್ರನ ಗುಣವನ್ನೂ ಏಕೆ ಸ್ಪರ್ಶಿಸಲೂ ಇಲ್ಲ?

* ನಹುಷನು ಸ್ವಾರಾಜ್ಯದಿಂದ ಬಿದ್ದುಹೋದನು; ಚಂದ್ರನು ಬೃಹಸ್ಪತಿಪತ್ನಿಯನ್ನು ಕಾಮಿಸಿದನು; ಇಂದ್ರನು ಗೌತಮಗೇಹಿನಿಯನ್ನು ಪ್ರವೇಶಮಾಡಿದನು: ಬಲಿ ಪಾತಾಳದ ಬುಡಕ್ಕೆ ಹೋದನು, ಮತ್ತೆ ಯಾರು ನೋಡಿದರೂ ಈ ಸಂಸಾರಸಮುದ್ರದ ಮಹಾತರಂಗಗಳಲ್ಲಿ ಬಹುಕಾಲವು ಮುಳುಗೇ ಇದ್ದರು: ಈ ಲಕ್ಷ್ಮಿಯನ್ನು ಅಂಕಚರಿಯನ್ನು ಮಾಡಿಕೊಂಡು ಪಾರವನ್ನು ಸೇರಿದವರು ಯಾರುತಾನೇ ಇರುವರು?

ವೃ|| ಎರೆಯಂ ತನ್ನಿಚ್ಚೆಗಾಗಲ್ ವಧುಗೆ ಪರರಿನೇನೇಂ ಸ್ಫುಲಿಂಗಂಗಳಿಂ
ಪೇ | ರುರಿಯಿರ್ಪಂದಿಂದು ಮಿಂಚುಂಬುಳುಗಳಿನಿರಲೇನಾಣ್ಮಕೂಳ್ತುಗ್ಗರ್ಳಿಂದೇ||
ನಿರೆ ಭಾಗ್ಯಂ ಗಂಗೆಯೇಂ ವಾಪಿಗಳಿನಿರೆ ಸುಧಾಸ್ವಾದಮೇಂಮದ್ದಿರ್ನೊಡ್ಡಿಂ |
ದಿರಲಾ ನಾರಾಯಣಂ ಸ್ವಾತ್ಮನೊಳಗೆ ಮೆರೆಯಲ್ಕನ್ಯದೇವರ್ಕ್ಕಳಿಂದೇಂ||೬೦||*

ದೇವ—ಮಹಾರಾಜನೇ ಹಾಗೇ ಆಗಲಿ; ಆದರೂ ಯೌವನದಲ್ಲಿ ಉಪಭುಕ್ತವಿಷಯನಾಗಿದ್ದು ಅಪರವಯಸ್ಸಲ್ಲಿ ವಿತೃಷ್ಣನಾದವನಿಗೆ ವಿಜ್ಞಾನವು ಉಪತ್ಕರವಾದುದು.

ರಾಜ—(ನಕ್ಕು) ಉಪಭುಕ್ತವಿಷಯನೇ ? ಅದನ್ನು ತಲೆಕೆಳಗಾಗಿ ಹೇಳಬೇಕು. ನೋಡು,

ವೃ|| ಭ್ರಮಿಪಂ ತಾಂ ವಿಷಯಂಗಳಂ ಭುಜಿಪೆನೆಂದೀ ದೇಹಿ ಯಂತಲ್ಲ
ದೇಂ | ಕ್ರಮದಿಂದಂ ವಿಷಯೇಚ್ಛೆಯೊಳ್ತಳೆಯನಾ ವಿಚ್ಛಿತ್ತಿಯಂ ಸಿದ್ಧಿಯಿಂ ||
ಪ್ರಮಿತಂ ದಲ್ ವಿಷಯಂಗಳೇ ಪುರುಷರಂ ಕರ್ವ್ವಂತೆವೊಲ್ ಭುಂಜಿಕುಂ |
ಸುಮುದಂಗೊಂಡುಳಿಗುಂ ನಿಪೀಡಿತರೆನಲ್ ವೃತ್ತರ್ಕ್ಕಳಂ ಸಿಪ್ಪೆವೊಲ್ ||೬೧||†
ಮತ್ತೆ

ಆರ್ಯಾವೃ|| ಬರಿದೆ ವಿಷ ವಿಷಯಮಿವರ್ಕಂ |
ತರಮಂ ಕಲ್ಪಿಸುಗುಮಲ್ತೆ ಲೋಕಮದಂ ||

* ಪತಿಯನ್ನು ಸ್ವಾಧೀನಮಾಡಿಕೊಂಡವಳಿಗೆ ಇತರಪುರುಷರಿಂದೇನು ? ಮಹಾಗ್ನಿಯಿರಲು ಕಿಡಿಗಳಿಂದೇನು ? ಚಂದ್ರನಿರಲು ಮಿಂಚುಹುಳುಗಳಿಂದೇನು ? ಬೆಳೆದು ಬರುವ ಭಾಗ್ಯವಿರಲು ರಾಜರು ನೀಡುವ ತಿಂಡಿಯ ಚೂರುಗಳಿಂದೇನು ? ಗಂಗೆಯಿರಲು ಬಾವಿಗಳಿಂದೇನು ? ಅಮೃತರಸವನ್ನು ಸೇವಿಸಿದವರಿಗೆ ಔಷಧಿಗಳಿಂದ ಆಗಬೇಕಾದುದೇನು ? ಸ್ವಾತ್ಮನಾದ ನಾರಾಯಣನು ಒಳಗೆ ಸ್ಫುರಿಸುತ್ತಿರಲು ಇತರ ದೇವತೆಗಳಲ್ಲಿ ಆಸಕ್ತಿಯಿಟ್ಟರೂ ಅವೆಲ್ಲಾ ನಮಗೆಷ್ಟರದು ?

† ನಾನು ವಿಷಯಗಳನ್ನು ಭುಂಜಿಸುವೆನು, ಎಂದು ದೇಹಿಗಿರುವ ಬುದ್ಧಿ ಭ್ರಮಮಾತ್ರವಾದುದು; ಹಾಗಲ್ಲದಿದ್ದರೆ ಆ ಭೋಗದಲ್ಲಿ ಎಂದಾದರೂ ತೃಪ್ತಿ ಹುಟ್ಟಿ ದೇಹಿಗೆ ವಿಷಯಗಳಲ್ಲಿರುವ ಇಚ್ಛೆ ವಿಚ್ಛಿತ್ತಿಯನ್ನು ಹೊಂದುವುದಿಲ್ಲ ! ನನ್ನ ಮತವಾದರೆ ಇದು, ಆ ವಿಷಯಗಳೇ ಪುರುಷರನ್ನು ಕಬ್ಬು ತಿನ್ನುವ ಹಾಗೆ ಭುಂಜಿಸುವುವು; ಅದರಿಂದ ಅವಕ್ಕೆ ತೃಪ್ತಿಯಾದಂತಾಗಲು ಹಿಂಡಿದ ಸಿಪ್ಪೆಯಂತೆ ವೃದ್ಧರನ್ನು ಪರಿತ್ಯಜಿಸುವುವು,

ಶರವಿಪೂರ್ವಡಜಾಜಂಗ |
ಳ್ಗರಿಯಲ್ಕಾಕಾರಮಾತ್ರಭವಂ ||೬೨|| *

ಮತ್ತೆ

ಕಂ|| ಇದು ತೃಷ್ಣೆ ಸಮಗ್ರಂ ಪೋ |
ಗದಿರಲ್ ಜವ್ವನದೊಳೇ ಹತಾಶೆ ಸಮಾಶ್ಲೇ ||
ಷದೆ ಸಹಚರಿ ಜರೆಯಿಂ ಮೆರೆ |
ದದೆನಿತ್ತುಂ ಕಿಳ್ತೊಡಂ ತೆರಳ್ವುದೆ ಬಳಿಕಂ ||೬೩|| †

ನೋಡು,

ವೃ|| ಜರೆಯುಗ್ರಜ್ವರಭಗ್ನನಪ್ಪೊಡೆ ನರಂ ನಿರ್ಬಾಧಕಂ ತೃಷ್ಣೆ ನಿ | ಶ್ಕರಣಂಗಳ್ ರದದಾರ್ಢ್ಯಮಂ ಕಚತಮೋಮಾಲಿನ್ಯಮಂ ದೇಹನಿ || ರ್ಭರತಾರುಣ್ಯಮನಾಯುರಾಯತತೆಯಂ ದೃಗ್ದ್ರಷ್ಟೃತಾಭಾಗ್ಯಮಂ | ಪೆರವಿನ್ನುಂ ವಿಭವಂಗಳಂ ಗಡವನಾ ಕಿಳ್ತಾದಮೇಂ ಮೋದಿಕುಂ ||೬೪|| *

---

* ವಿಷಕ್ಕೂ, ವಿಷಯಕ್ಕೂ ಜನರು ಇಲ್ಲದ ಭೇದವನ್ನು ಕಲ್ಪಿಸಿರುವರು. "ಅಜಾ" "ಅಜ" ಇವಕ್ಕೆ ಭೇದವಿಲ್ಲವೇ ಎಂದರೆ ಆ ಭೇದವು ಆಕಾರಜನ್ಯವಾದುದು.

ಟಿಪ್ಪಣಿ—'ಅಜಾ' ಎಂದರೆ ಸಾಂಖ್ಯಮತಾನುಸಾರವಾಗಿ ಪ್ರಕೃತಿ; ಇದೇ ಮಾಯೆಯೆನಿಸುವುದು. 'ಅಜ' ಎಂದರೆ, ಪುರುಷನು; ಇದೇ ಸಾಕ್ಷಾತ್ಪರಬ್ರಹ್ಮವಸ್ತು. ಮಾಯೆಗಾದರೆ ಆಕಾರವಿರಬಹುದು, ಆತ್ಮನಾದರೆ ನಿರಾಕಾರನು, ಆದುದರಿಂದ 'ಅಜಾ' 'ಅಜ' ಇವಕ್ಕಿರುವ ಭೇದವು ಆಕಾರಮಾತ್ರವು, ಶಾಬ್ದಿಕಭೇದವೂ ಅಷ್ಟೆ; ಒಂದು ಅಕಾರಾಂತವಾದುದು ಇನ್ನೊಂದು ಆಕಾರಾಂತವಾದುದು. ಅ[ಕಾರ] + ಆಕಾರ = ಆಕಾರ [ಸವರ್ಣದೀರ್ಘ] ವಿಷ, ವಿಷಯ—ಇವೋ ಎಂದರೆ, ಎರಡೂ ಮಾಯಾವರ್ಗಕ್ಕೇ ಸೇರಿದುವು; ಇವಕ್ಕೆ ಆ ದೃಷ್ಟಿಯಿಂದ ಭೇದವಿಲ್ಲ. ಮತ್ತೆ ವಿಷಯುಗಳು ಜ್ಞಾನಬಾಧಕಗಳಾದುದರಿಂದ ವಿಷದಂತೆಯೇ ಪರಿಣಮಿಸುವುವು.

† ಈ ಪಾಪಿಷ್ಠತೃಷ್ಣೆ ಯೌವನದಲ್ಲೇ ಸಂಪೂರ್ಣವಾಗಿ ಹೋಗಿಬಿಡಬೇಕು; ಇಲ್ಲದಿದ್ದರೆ ಅದು ತನ್ನ ಸಹಚರಿಯಾದ ಜರೆಯೊಡನೆ ಸಮಾಶ್ಲೇಷಹೊಂದಿ ಎಷ್ಟು ಕಿತ್ತರೂ ಹೋಗುವುದಿಲ್ಲ.

* ದೇಹಿ ಜರೆಯೆಂಬ ಜ್ವರದಿಂದ ಅತಿಮಾತ್ರಪರಾಜಿತನಾಗಲು ಈ ತೃಷ್ಣೆ ಅವನ ಗುಣಗಳಾಗಿದ್ದ ಶರಣನ್ನು ಕಾಣದ ಹಲ್ಲುಗಳ ದಾರ್ಢ್ಯವನ್ನೂ, ತಲೆಕೂದಲ ಕತ್ತಲೆಯಂತೆ ಕರಿದಾದ ಬಣ್ಣವನ್ನೂ ಕಣ್ಣುಗಳ ರೂಪಗ್ರಾಹಕತ್ವವನ್ನೂ, ದೇಹದ ತಾರುಣ್ಯವನ್ನೂ, ಆಯುಷಧದೈರ್ಘ್ಯವನ್ನೂ ಇನ್ನೂ ಅನೇಕ ಗುಣಗಳನ್ನೂ ಆಚ್ಛೇದಿಸಿ ಸಂಮುದವನ್ನು ಹೊಂದುವುದಲ್ಲವೇ?

ದೇವ—ಅಯ್ಯೋ, ಕಷ್ಟವು ಬಂತು-ಮಹಾಯೋಗಿಯೇ, ಇನ್ನು ಯಾವ ಪ್ರಕಾರವಿರುವುದು ?

ಯೋಗಿ—ರಾಜನೇ, ಬಾ ನಿನ್ನ ವೈರಾಗ್ಯಕ್ಕೆ ಬೀಜಭೂತೆಯಾದ ನಿನ್ನ ಪ್ರೇಯಸಿಯನ್ನು ಯೋಗಬಲದಿಂದ ಬದುಕಿಸಿ ಅವಳು ನಿನ್ನನ್ನು ರಹಸ್ಯದಲ್ಲಿ ಕೂಡುವಂತೆ ಮಾಡಿ ನಿನ್ನ ನಿರ್ವೇದವನ್ನು ಹೋಗಲಾಡಿಸುವೆನು.

(ಎಂದು ರಾಜನ ಕೈಯನ್ನು ಹಿಡಿದುಕೊಂಡು ಪರಿಕ್ರಮಿಸುವನು).

ದೇವ—(ಆನಂದದಿಂದ) ನಾನೂ ಇಲ್ಲೇ ರಹಸ್ಯಸ್ಥಾನವನ್ನು ಹುಡುಕಿಕೊಳ್ಳುವೆನು.

(ಎಂದೆಲ್ಲರೂ ಹೋಗುವರು)

ಇಂತು ಚತುರ್ಥಾಂಕಂ.



|| ಶ್ರೀಃ ||

## ಪಂಚಮಾಂಕಂ.

(ಅನಂತರದಲ್ಲಿ ನ್ಮೃತೋಜ್ಜೀವಿತೆಯಾದ ಭಾನುಮತಿಯೂ ರಾಜನೂ ಏಕಾಂತದಲ್ಲಿ ಪ್ರವೇಶಿಸುವರು).

ಭಾನುಮತಿ—ಆರ್ಯಪುತ್ರನೇ, ನನ್ನ ಅಂಗಗಳು ಶಕ್ತಿಯಿಂದಲೂ, ಸಾರದಿಂದಲೂ, ಹೀನವಾಗಿರುವುವು; ಆದುದರಿಂದ ನನ್ನನ್ನು ಹಿಡಿದುಕೊ.

(ಎಂದು ಆಲಿಂಗಿಸಲಪೇಕ್ಷಿಸುವಳು)

(ರಾಜನು ವಾರಿಸುವನು).

ಭಾನು—(ವೈಲಕ್ಷ್ಯದಿಂದ) ಆರ್ಯಪುತ್ರನೇ, ಇದೇನು? ಪರಾಙ್ಮುಖನಾಗಿರುವುದು?

ರಾಜ—ಪರಾಙ್ಮುಖನೋ, ಪರಾಙ್ಮುಖನಲ್ಲವೋ?

ಭಾನು—ನನ್ನ ದೇಹಸ್ಪರ್ಶವನ್ನೂ ಪರಿಹರಿಸುವ ಆರ್ಯಪುತ್ರನು ಪರಾಙ್ಮುಖನಲ್ಲವೆಂದರೇನು?

ರಾಜ- ಕಂದ|| ಮೃತಿಯೆಯ್ದಲೆನಗೆ ನೀನುಂ |
ರತಮಾದತ್ತಸುವಿಯೋಗಮಂ ತಾಳ್ದದಪೌ ||
ಪ್ರತಿಕಾರಮಿದರ್ಕೆ ಯೋಗದ |
ಸೃತಿಯಿಂದಜರಾಮರತ್ವಕಾನಿಚ್ಛಿಸುವೆಂ ||೭೫|| *

ಭಾನು—(ಭಯದಿಂದ, ತನ್ನಲ್ಲಿಯೇ) ನನ್ನನ್ನು ಪರಿತ್ಯಜಿಸುವ ಬುದ್ಧಿಯಿಂದಲೇ ಆರ್ಯಪುತ್ರನು ಇದನ್ನು ಹೇಳಿರಬೇಕಲ್ಲದೆ ಬೇರೆಯಿಲ್ಲ. ಹಾಗಾದರೆ ಇನ್ನೇನು ಗತಿ, ಆರ್ಯಪುತ್ರನನ್ನು ಹಿಂದಿರುಗಿಸುವುದು ಹೇಗೆ? ಇರಲಿ, ಹೀಗೆ ತಾನೇ ಎಷ್ಟು ನಡೆವುದು?

(ಎಂದು ಕೋಪದಿಂದ ಅತಿತರಳವೂ ಭಂಗುರವೂ ಆದ ದೃಷ್ಟಿಯಿಂದ ರಾಜನನ್ನು ನೋಡುವಳು).

---

* ನಾನು ಸಾವ ಪಕ್ಷದಲ್ಲಿ ನೀನೂ ಪ್ರಾಣವಿಯೋಗವನ್ನು ಹೊಂದುವೆಯೆಂಬುದು ಗೊತ್ತಾಗಿಯೇ ಇರುವುದು, ಇದಕ್ಕೆ ಪ್ರತೀಕಾರವಾಗಿ ನಾನು ಯೋಗಮಾರ್ಗದಿಂದ ಅಜರಾಮರತ್ವವನ್ನು ಹೊಂದಲು ಇಚ್ಛಿಸುವೆನು.

ರಾಜ—(ತನ್ನಲ್ಲಿ)

ವೃ|| ಎಣಿಸಲ್ಕಿದೇ ಕುಟಿಲಮಾಚಲಪದ್ಮದೀರ್ಘೇ | ಕ್ಷಣೆಯಾ ಹಲಾಹಲ ಸುತೀಕ್ಷ್ಣಕಟಾಕ್ಷಜಾತಂ || ಚಣಮೊಂದೆ ಬಿಳ್ದೊಡಮಿದೆನ್ನತು ಚೇತಮಾದ | ತ್ರಣಮಂತು ಮೋಹದ ತಮಿಸ್ರಬಿಲಾವಗಾಢಂ ||೬೬|| *

ಮತ್ತೆ

ಕಂ|| ಇದು ಭಾವಭಂಗುರಂ ಸೈ |
ಪುದು ಕಷ್ಟಂ ಸ್ತ್ರೀಯ ಚಲದೃಗಂತನಿಪಾತಂ ||
ಇದು ಲಬ್ಧವಿಪಾಕಂ ಚಿ |
ತ್ತದೊಳಾಗೆ ವಿವೇಕಮೇಂ ವರಾಕಂ ಗೆಯ್ಗುಂ ||೬೭|| †

ಭಾನು—(ಆನಂದದಿಂದ ತನ್ನಲ್ಲಿಯೇ) ಆರ್ಯಪುತ್ರನು ಅನುಕೂಲನಾದಂತೆ ತೋರುವನು.

(ಎಂದು ಮತ್ತೆ ಸ್ಮಿತಭಂಗುರದೃಷ್ಟಿಯಿಂದ ನೋಡುವಳು).

ರಾಜ—(ಕಣ್ಣುತಿರುಗಿಸಿಕೊಂಡು) ಸಾಕು, ಇನ್ನುಮೇಲೆ ನಿನ್ನ ಕಣ್ಣು ಕೊಂಕಿಸುವುದನ್ನು ಬಿಡು.

ಕಂ|| ಮಸಿಯು ಮಳೆಸೂಸುತುಂ ತಾ |
ಮಸಿ ಚೇತಮನಾವರಿಕ್ಕುಮೆನ್ನೆವರಂ ತಾಂ ||
ಬಸಕನ್ನೆವರಂ ಕೊಳ್ಗುಂ |
ಕುಸುಮಾಸ್ತ್ರೋಜ್ಜೀವಿ ಪೆಣ್ಗಳಾ ದೃಗ್ಭಂಗಂ ||೬೮|| ‡

* ಇವೆ ಅಲ್ಲವೆ ತರಳವಾಗಿಯೂ, ಕಮಲದಂತೆ ದೀರ್ಘವಾಗಿಯೂ ಇರುವ ಕಣ್ಣುಗಳುಳ್ಳ ಇವಳ ಕುಟಿಲವೂ ಕಾಲಕೂಟವಿಷದಂತೆ ಕಟುವೂ ಆದ ಆ ಕಟಾಕ್ಷಗಳು! ಇವು ಒಂದು ಕ್ಷಣವು ನನ್ನ ಮೇಲೆ ಬಿದ್ದರೂ ಚೇತಸ್ಸು ಮತ್ತೆಮತ್ತೆಯೂ ಕೂಡ ಮೋಹಾಂಧಕಾರಕುಹರದಲ್ಲಿ ನಿಮಗ್ನವಾಗಿತ್ತಲ್ಲವೇ?

† ತರಳವಾಗಿಯೂ, ಭಾವದಿಂದ ಭಂಗುರವಾಗಿಯೂ ಇರುವ ತರುಣಿಯರ ಈ ಕಡೆಗಣ್ಣುನಿಪಾತವನ್ನು ಸಹಿಸುವುದು ಕಷ್ಟವು. ಇದು ಮನಸ್ಸಲ್ಲಿ ವಿಪಾಕವನ್ನು ಹೊಂದಿಬಿಟ್ಟಪಕ್ಷದಲ್ಲಿ ಬಡವಾದ ವಿವೇಕವು ಏನನ್ನು ತಾನೇ ಮಾಡಬಲ್ಲುದು?

‡ ಎಲ್ಲಿಯವರೆಗೆ ಆತಮಸ್ಸಂಬಂಧವಾದ ಮಸೀವೃಷ್ಟಿ ಹೃದಯಕ್ಕೆ ಆವರಣವಾಗಿರುವುದೋ ಅಲ್ಲಿಯವರೆಗೆ ಹರಿಣಾಕ್ಷಿಯರ ಮನ್ಮಥವಿಕಾರವಾದ ದೃಗ್ಭಂಗಿಗಳು ಮನಸ್ಸನ್ನು ಹಾರಿಸಿಕೊಂಡುಹೋಗುವುವು.

ಭಾನು—(ಕಣ್ಣೀರುತುಂಬಿ) ಹಾ, ದೈವವೇ! ನೀನು ಹೇಗೆ ಪರಿಣಮಿಸಿದೆ?

ರಾಜ—ವೃ|| ಬರಿದಿಂತೀ ಸ್ಮಿತಚಿತ್ರಮಂ ಪರುಷನೊಳ್ ದೃಗ್ಯುಗ್ಮಮಂ ತೋರ್ಪೆಯೇಂ | ಸರಸಾಲಾಪಮಿದೆಲ್ಲಮಂ ಬಿಡು ಬಿಡಿಂದೆಲ್ಲಂವಿಲಾಪಂಗಳಂ ||
ಪಿರಿದಪ್ಪೊಂದವಸಾದಭೀತಿಯಿನದಂ ಮಾಣ್ದಂ ಗಡಾಸ್ವಾದಮಂ। ತೆರಳ್ದತ್ತೆನ್ನತು ಕಾಮಮಿಂದು ವಿಪರೀತಂ ಜತ್ನದಿಂದೇಂ ಫಲಂ ||೧೯|| †

ಮತ್ತೆ,

ವೃ|| ತೊಡಗಲ್ಕಾತ್ಮದಮಕ್ಕೆ ಬುದ್ಧಿಯೊಲವಂ ಪುಟ್ಟಿಪ್ಪಳೇಂ ರಂಭೆಯುಂ | ಬಿಡೆ ತಾಂ ಮೇನಕೆಯೇಗುವಳ್ ಮನಮನೇ ಕಂಂತೇಷು ಕಾವಂ ಜಿತಂ || ಒಡಲೊಳ್ ಪೇಸಲವಜ್ಞೆಯುರ್ವಶಿಗಮಾ ಚೇತಂ ಬಸಕ್ಕೆಯ್ದಿರಲ್ |
ಕಡಿಯಲ್ ಮಾಯೆಯನೇ ವಿಲಾಸಿಸಿ ಮನಕ್ಕಂದಿಷ್ಟೆಯೇನಪ್ಪಳೇ ||೨೦|| *

ಭಾನು—ಆರ್ಯಪುತ್ರನೇ? ಹೀಗೆ ಆಗುವ ಪಕ್ಷದಲ್ಲಿ ಗೃಹಸ್ಥಾಶ್ರಮದಲ್ಲಿಯೇ ಇದ್ದರೂ ಜನಕನಿಗೆ ಹೇಗೋ ಹಾಗೆ ನಿನಗೂ ವಿಜ್ಞಾನವು ಸುಲಭವೇ!

ರಾಜ—ಅವರಾದರೆ ಜನಕಾದಿಗಳು ಅನೇಕ ಜನ್ಮಸಂಸಿದ್ಧರಾಗಿ ಜೀವನ್ಮುಕ್ತಾವಸ್ಥೆಯನ್ನು ಹೊಂದಿ ಹಾಗಿದ್ದರು. ಅಪಕ್ವಕಷಾಯರಾದ ನನ್ನಂತಹರಿಗೆ ಅದು ಮಾರ್ಗವಲ್ಲ ಆದುದರಿಂದ,

ವೃ|| ಪಿರಿದಂಧಕೂಪಸದೃಶಂ ಗೃಹದಿಂದೆ ಖೇದಂ | ಗುರುವಾ ಉಪಾಸ

† ಕಣ್ಣುಗಳನ್ನು ಮಂದಹಾಸದಿಂದ ಚಿತ್ರವಾಗುವಂತೆ ಏಕೆ ಮಾಡುವೆ? ಪರುಷನಾದವನಲ್ಲಿ ಅವುಗಳಿಂದೇನು? ನಿನ್ನ ಸ್ನೇಹಾಲಾಪಗಳೆಲ್ಲವೂ ಸಾಕು, ಮತ್ತೆ ನಿನ್ನ ವಿಲಾಪಗಳೂ ಸಾಕು, ಬಲುವಾದ ನಾಶವು ಸಂಭವಿಸುವುದೆಂಬ ಭಯದಿಂದ ನಾನು ಆಸ್ವಾದವನ್ನು ಬಿಡಲು ಕಾಮವು ನನ್ನನ್ನು ಬಿಟ್ಟುಹೋಗಲಾಗಿ ನನ್ನ ಮುಂದೆ ತಕ್ಕುದಲ್ಲದ ರೀತಿಯಿಂದ ಮಾಡುವ ಯತ್ನವೆಲ್ಲವೂ ವಿಫಲವು.

* ಆತ್ಮದಮನಮಾಡಲು ಬುದ್ಧಿ ಆರಂಭಯುಕ್ತವಾಗಲು ರಂಭೆಯೂ ಕೂಡ ಏನು ಭಾವವನ್ನು ಹುಟ್ಟಿಸಬಲ್ಲಳೇ? ಆ ಮೊಂಡಬಿಲ್ಲ ಕಾಮನು ಮನಸ್ಸನ್ನೇ ಬಿಟ್ಟುಹೋದಮೇಲೆ ಮೇನಕೆಯಿಂದ ತಾನೇ ಏನಾಗುವುದು? ದೇಹದಲ್ಲಿ ಜಿಹಾಸೆ ಹುಟ್ಟಿ ಮನಸ್ಸು ವಶೀಕರಿಸಲ್ಪಡಲು ಊರ್ವಶಿಯನ್ನೇನು ತಿರಸ್ಕರಿಸಿದ ಹಾಗಾಗಲಿಲ್ಲವೇ? ಮಾಯೆಯೇ ಜಯಿಸಲ್ಪಟ್ಟ ಮೇಲೆ ಭಾವವನ್ನು ಉತ್ಪಾದಿಸುವಳೂಕೂಡ ಮನಸ್ಸಿಗೆ ಅಭಿಮತೆಯಾಗುವಳೇ?

ನದಿನಿಂದೆನತುದ್ಧೃತಂ ತಾಂ || ಇರದತ್ತಲೇ ಬಿಳಲದಂ ಭವವರ್ತ್ಮದೊಳಾ |
ನರಿಯಲ್ ಬಳಿಕ್ಕೆ ಬಳಿಕಂ ಬಿಡೆ ನಿನ್ನದೆಂದುಂ ||೭೧|| ‡

ನಾನು ಗೃಹಿಯಾಗಿದ್ದಾಗ ತಿಳಿವಳಿಕೆಯಿದ್ದರೂಕೂಡ ಸರಿಯಾಗಿ ಆಚರಿಸುವುದಕ್ಕೆ ನನಗೆ ಪಾರವಿರಲಿಲ್ಲ. ಅದರ ಪರಿಣಾಮವಾಗಿ,

ಕಂ || ಪರಿದತ್ತಭೀಷ್ಟಮೆಲ್ಲಮಿ |
ದಿರೊಳೇ ನಿಲ್ದುದರ್ಕೆ ಚಿತ್ತಮಾಶಾನದ್ಧಂ ||
ವಿರಚಿಸುತೆ ಮರ್ಮಸಂಧಿವಿ |
ಪರದಾರಕಕರ್ಮಚಯಮುನಳಲ್ಪೊರೆ ಭುಂಕುಂ ||೭೨|| *

ಹಾ ! ಚಿಹಿ ಇದೇನು ಕಷ್ಟವು !

ವೃ|| ಹತನಿಂ ತಪ್ತಮದೆನ್ನಿನಿಲ್ಲ ತಪಮುಲ್ತಾದರ್ ಪರರ್ ತಪ್ತರೆ | ನ್ನತು ಕೋಶಂ ಭೃತಮಾಯ್ತು ವಿತ್ತದೆ ದರೀಕೋಶಾಶ್ರಯಂ ಕಾಣೆನಾಂ || ಅತಿದೋಷಾರ್ಜನೆಗೆಯ್ದೆನಿಲ್ಲ ಶಮದಿಂ ದೋಷಾಚಯುಕ್ಷೇಪಮ | ಚ್ಯುತನಾರಾಧನೆಗೆಯ್ದುದಿಲ್ಲಮೆನಸುಂ ವ್ಯಾಮೋಹಮಾಯ್ತಚ್ಯುತಂ ||೭೩|| †

(ಎಂದು ಮುಖವನ್ನು ತಿರುಗಿಸಿಕೊಂಡು ನಡೆವನು).

ಭಾನು—ಪಂಚಕ, ನನ್ನನ್ನು ಪರಿತ್ಯಜಿಸಿ ಎಲ್ಲಿ ಹೋಗುವೆ ?

(ಎಂದು ಉತ್ತರೀಯದ ಸೆರಗನ್ನು ಹಿಡಿದುಕೊಳ್ಳುವಳು).

---

‡ ನನ್ನ ಮನಸ್ಸಾದರೆ ಮಹಾಂಧಕೂಪರೂಪವಾದ ಗೃಹದಿಂದ ಗುರೂಪಾಸನೆಮಾಡಲಾಗಿ ಈಗ ತಾನೇ ಉದ್ಧರಿಸಲ್ಪಟ್ಟಿರುವುದು; ಇನ್ನೂ ಇದನ್ನು ಮತ್ತೆಮತ್ತೆ ಸಂಸಾರಮಾರ್ಗವಾದ ಅಲ್ಲಿಯೇ ನಾನು ಬೀರೆ ಕೆಡಹತಕ್ಕವನಲ್ಲ.

* ನಾನು ನೋಡುತ್ತಿದ್ದ ಹಾಗೆಯೇ ಇಷ್ಟವೂ, ಇಷ್ಟವೂ ಆದುದು ಹೋಗುತ್ತ ಹೋಗುತ್ತ ಬಂತು; ನಿಂತುದಕ್ಕೆ ನಿಂತುಪಕ್ಕೆ ಚಿತ್ತವು ಆಸೆಯಿಂದ ನದ್ಧವಾಯಿತು. ಯಾವುವು ಮರ್ಮಸಂಧಿಗಳನ್ನು ಕೊರೆದುಕೊರೆದು ದುಃಖಭಾರವನ್ನು ಹೊರಿಸಿದುವೋ ಆ ಆ ಕರ್ಮವು ಮಾಡಿತು.

† ಹತಬುದ್ಧಿಯುಳ್ಳ ನನ್ನಿಂದ ತಪಸ್ಸು ತಪ್ತ (ಆಚರಿತ) ವಾಗಲಿಲ್ಲ, ನನ್ನ ದೆಸೆಯಿಂದ ಇತರರು ಅಧಿಕವಾಗಿ ತಪ್ತ (ಸಂತಾಪಿಸಲ್ಪಟ್ಟವ) ರಾದರು; ನನ್ನ ಕೋಶಗಳೀ ಧನಗಳಿಂದ ತುಂಬಲ್ಪಟ್ಟುವೇ ಹೊರತು ದರೀಕೋಶ [ಗುಹಾಂತಃಪ್ರದೇಶ] ಗಳು ಬೇರೆ ಸಂಶ್ರಯಿಸಲ್ಪಡಲಿಲ್ಲ; ಅಯ್ಯೋ, ನಾನು ದೋಷಗಳನ್ನೇ ಅರ್ಜಿಸಿದೆನು, ಶಮೆಹೊಂದಿ ಸುಖದಿಂದ ದೋಷಾಚಯ [ರಾತ್ರಿ ಸಮೂಹ] ವು ಕಳೆಯಲ್ಪಡಲಿಲ್ಲ; ಅಚ್ಯುತವಾದ [ಚ್ಯುತಿಯಿಲ್ಲದ] ವ್ಯಾಮೋಹವು ಉಂಟಾಯಿತೇ ಹೊರತು ಅಚ್ಯುತನು [ವಿಷ್ಣು] ಬೇರೆ ಆರಾಧಿಸಲ್ಪಡಲಿಲ್ಲ.

(ರಾಜನು ಉತ್ತರೀಯವನ್ನು ಬಿಡಿಸಿಕೊಂಡು ಪರಿಕ್ರಮಿಸುವನು.
ಭಾನುಮತಿ ಓಡಿಬಂದು ಕಯ್ಯಿಹಿಡಿದುಕೊಳ್ಳುವಳು).

ರಾಜ—(ನಿಂತುಕೊಂಡು ಕೋಪದಿಂದ) ಎಲೌ ದುರರ್ಥಬಹುಳೆಯೇ ?

ವೃ|| ಅಡಕಿರೆ ಮಾಂಸಸಂಹತಿ ಕೆದರ್ದಿರೆ ವಾಲಧಿಯೊಡ್ಡದಟ್ಟಿ ಸಂ | ಗಡಿಸೆ ಕರಾಳಮಾವೃತಕುಕಂಥಮಲಾಂತರಸಾಸ್ಥಿಮಜ್ಜೆಯಾ || ಗಡಣಮೆ ನೀನೆ ನಿಪ್ಪೆ ವಿನಿಪಾತಶತಂಗಳೆನಿತ್ತು ನೀನಿರ | ಲ್ಕೊಡನೆಯನುಕ್ರಮಂ ಬಳಿಕೆ ಬಪ್ಪುರ್ವವಂ ನುಡಿಯಲ್ಕೆ ಸಾಧ್ಯಮೇ ||೭೪|| *

ವೃ|| ಕೊಳಕಯ್ಗಿಚ್ಛೆಯೆ ಗಂಡರೋಗಮನದಿನ್ನೇಂ ಸ್ಥೂಲಮಾಂಸಂ ಕುಚಂ | ಬಿಲಮಂ ಚರ್ಮಕಫಾಸ್ಥಿಯುಕ್ತಮನದಿನ್ನೇಂ ವಕ್ತ್ರಮಾರ್ ಚುಂಬಿಪರ್ || ಸುಳಿವಾ ಪೋಪೆಲರಿರ್ಪ್ಪ ಭಸ್ತ್ರಿಯನದಿನ್ನೇಂ ಕಾಯಮಾರ್ ತಬ್ಬುರ್ವರ್ ಮಲಮೂತ್ರಪ್ರಚುರಂ ವಿಗರ್ಹ್ಯನರಕಂ ಸ್ತ್ರೀಯಿನ್ನದೇಂ ಬೇಳ್ಪರಾರ್ ||೭೫|| †

(ಎಂದು ಕಯ್ಯನ್ನು ಕಿತ್ತುಕೊಳ್ಳುವನು).

(ಭಾನುಮತಿ ಅಳುತ್ತ ರಾಜನ ಕಾಲುಗಳಿಗೆ ಬೀಳುವಳು)

ರಾಜ—(ಖೇದದಿಂದ, ತನ್ನಲ್ಲಿ) ವಿಷಯಗಳು ಎಷ್ಟು ದುರತಿಕ್ರಮಣೀಯಗಳಾಗಿರುವುವು ?

ಕಂ|| ಪರಲ್ಗಳ ಗ್ರಂಥಿಗಳಂತಿರೆ |
ವಿರಚಿಸದೀಯಿಂದ್ರಿಯಂಗಳಂ ಮನಮಂ ನಿ ||
ರ್ಭರವಜ್ರಸಾರಮಯಮಂ |
ನರನಾಗ್ಗರ್ದು ಬಲ್ಪು ಜಯಿಸೆ ವಿಷಯವ್ರಜಮಂ ||೭೬|| *

* ಸ್ನಾಯು [ಮಾಂಸಖಂಡ] ಗಳಿಂದ ಬದ್ಧವಾಗಿ ದೊಡ್ಡಬಾಲ [ಕೂದಲು] ದಿಂದ ಕೂಡಿ ಕರಾಳವಾದ ಚರ್ಮವೂ ಮತ್ತೆ ಕಂತೆ, ಇವುಗಳ ಒಳಗೆ ತುಂಬಿರುವ ಮಲಾಂಶವಾದ ರಸಗಳು ಅಸ್ಥಿ (ಮೂಳೆ), ಮಜ್ಜೆ, ಇವುಗಳ ಸಮೂಹವೇ ನೀನಾಗಿರುವೆ, ನೀನು ಒಡನಿರಲು ಯಾವ ವಿನಿಪಾತಶತಗಳು ಪ್ರಾಪ್ತವಾಗುವುವೋ ಅವು ಎಷ್ಟೆಂದು ತಾನೇ ಹೇಳಲಿ.

† ಗಂಡವೆಂಬ ರೋಗವನ್ನು ಹಿಡಿದುಕೊಳ್ಳಲು ಕಯ್ಯಿ ಅಪೇಕ್ಷಿಸುವುದೇ—ಸ್ಥೂಲಮಾಂಸವಾದ ಕುಚವು ಇನ್ನೇನು ? ಶ್ಲೇಷ್ಮ, ಅಸ್ಥಿ, ಚರ್ಮ ಇವುಗಳಿಂದ ನಿಚಿತವಾದ ಬಿಲವನ್ನೂ ಚುಂಬಿಸುವುದಕ್ಕೆ ಹೇಗೆ ಆಗುವುದು ? ಮುಖವು ಇನ್ನೇನು ? ಗಾಳಿ ಹೋಗುತ್ತಲೂ, ಬರುತ್ತಲೂ ಇರುವ ತಿದಿಯನ್ನು ಯಾರು ಆಲಿಂಗಿಸಿಕೊಳ್ಳುವರು, ದೇಹವು ಇನ್ನೇನು ? ಮಲಮೂತ್ರಗಳು ತುಂಬಿ ಗರ್ಹ್ಯವಾದ ನರಕದಲ್ಲಿ ಮಾಡತಕ್ಕದೇನು—ಸ್ತ್ರೀ ಇನ್ನೇನು ?

* ಇಂದ್ರಿಯಗಳನ್ನು ಕಲ್ಲ ಗಂಟುಗಳನ್ನಾಗಿಯೂ ಮನಸ್ಸನ್ನು ವಜ್ರಸಾರಮಯವಾ

(ದೇವತಿಲಕನು ತಾನು ನಿಂತಿದ್ದ ರಹಸ್ಯಸ್ಥಾನದಿಂದ ಮುಂದೆ ಬರುವನು)

ದೇವ—ಮಹಾರಾಜನು ಸ್ವಲ್ಪಮಂಥರನಾದಂತೆ ಕಾಣುವನು; ಇದೇ ಸಮಯವು. (ಎಂದು ಬಳಿಗೆ ಬಂದು) ಇನ್ನುಮುಂದೆ ದೇವಿಗೆ ಪ್ರಸಾದವು ಮಾಡಲ್ಪಡಲಿ-ಅಹಾ, ಇದೇನು ? ಅವಳ ಪ್ರಣಯಸುಖವು ಪರಿತ್ಯಜಿಸಲ್ಪಡುತ್ತಿರುವುದು ?

ರಾಜ—(ಕಾಲುಗಳನ್ನು ಬಿಡಿಸಿಕೊಂಡು)

ವೃ|| ವಹಿಕುಂ ಮೋಹಮನಲ್ತೆ ಪಕ್ತಿಯೊಳದೀಷನ್ಮಾತ್ರಮಾಹ್ಲಾದಮಂ| ಬಹುವೈರಸ್ಯದಪೀತಿಯಾಗೆ ಕುಡೆಯುಂ ಚಿತ್ತಂ ಹೃತಂ ಮೌಢ್ಯದಿಂ || ಮಹಿಳಾಖ್ಯಂ ಧೃತಕಾಲಕೂಟ ಮಧುಕೋದ್ಭೂತಾಸವಸ್ವಾದುವೆಂ | ತಹಿತಂ ಭೀತಿದಮಪ್ಪುದಂತು ಚಿರದೆಂದುಂ ಸಾರ್ಚ್ಚದಾನಂದಮಂ ||೭೭|| †

ಮತ್ತೆ,

ವೃ|| ಉಡುಗಿಕ್ಕುಂ ಧೃತಿಯಂ ಧನಂ ಕವಳಿಕುಂ ಚಿತ್ತಕ್ಕದುನ್ಮಾದಿಕುಂ | ಕೆಡೆಯಿಕ್ಕುಂ ಪಧದೊಳ್ ರತಾಂತದೊಳದಂ ಕುತ್ಸಾಮಲಂ ನೀಡುಗುಂ|| ತಡೆಗುಂ ನಿದ್ರೆಯದೆಯ್ದದಂತುಳಿಯಿಕುಂ ಪ್ರಾಣೋಪಮಂ ಬಂಧುವಂ | ಕಡುಮುತ್ತಂಬೊಲದಾಗಿಕುಂ ಯುವನುಮಂ ಪೆಣ್ಣೆತ್ತಲಿಂ ಪೆಣ್ಣಿವಳ್ ||೭೮|| ‡

---

ಗಿಯೂ ಮಾಡದಿದ್ದರೆ ಯಾವನು ತಾನೇ ವಿಷಯಗಳನ್ನು ಜಯಿಸಲು ಪೌರುಷವನ್ನು ಹೊಂದುವನು ?

† ಈ ಸ್ತ್ರೀಯೆಂಬಳು ಬಹು ವೈರಸ್ಯವಿಧುರೆ; ಮನಸ್ಸು ಅಜ್ಞಾನದಿಂದ ಅಪಹೃತವಾಗಲು ಎಲ್ಲಿಯೋ ಈಷನ್ಮಾತ್ರವಾದ ಆಹ್ಲಾದನವನ್ನು ಮಾಡಿದರೂ ಪರಿಪಾಕದಲ್ಲಿ ಮೋಹವನ್ನು ತಂದುಹಾಕುವಳು. ಹಾಲಾಹಲಗರ್ಭಿತವಾದ ಮಾಧ್ವೀಕರಸದಂತಿರುವಳು; ತತ್ಕಾಲದಲ್ಲಿ ಮಧುರೆಯಾಗಿದ್ದರೂ ಚಿರಕಾಲಕ್ಕೆ ಎಂತಹ ದುಃಖವನ್ನು ಕೊಡುವಳೋ ಅಂತಹ ಸುಖವನ್ನು ಒಂದುಕಾಲಕ್ಕೂ ಕೊಡಲಾರಳು.

ಟಿಪ್ಪಣಿ—ವಿಧುರೆ [ಸಂಸ್ಕೃತರೂಪ 'ವಿಧುರಾ'] ಇದೊಂದು ಮಾದಕಪೇಯ ವಿಶೇಷವು ಮಸರಿಗೆ ಸಕ್ಕರೆಯನ್ನು ಹಾಕಿ ಅದಕ್ಕೆ ಕೆಲವು ಗಂಧದ್ರವ್ಯಗಳನ್ನು ಸೇರಿಸಿ ಮಾಡಿದುದೆಂದು ಹೇಳುವರು.

‡ ಧೈರ್ಯವನ್ನು ಧ್ವಂಸಮಾಡುವಳು; ಸಿರಿಯನ್ನು ನುಂಗಿಬಿಡುವಳು; ಮನಸ್ಸನ್ನು ಉನ್ಮಾದಿಸುವಳು; ಕಾಲಿಗೆ ಬೀಳಿಸಿಕೊಳ್ಳುವಳು; ರತಾಂತದಲ್ಲಿ ಕುತ್ಸಾಮಲವನ್ನು ಕೊಡುವಳು; ಜಾಗರವನ್ನು ತಂದುಹಾಕುವಳು; ಪ್ರಾಣಸಮರಾದ ಬಂಧುಗಳನ್ನೂ ತೊರೆಯಿಸುವಳು; ತರುಣನನ್ನೂ ಜರಾಯುಕ್ತನನ್ನಾಗಿ ಮಾಡುವಳು; ಇನ್ನು ಹೆಣ್ಣು ಹೆಣ್ಣು ಎಂದರೆ ಎಲ್ಲಿ ಹೆಣ್ಣು ?

ಭಾನು—ಹಾ ! ಹಾ ! ಒಬ್ಬರಿಗೊಬ್ಬರು ಪರವಶರಾಗಿರಲು ಅನುಭವಿಸಿದ ಆ ಆ ವಿಲಾಸಗಳು ಎಲ್ಲಿ ಹೋದುವು ?

ರಾಜ—ವೃ|| ಇನಿಯಂ ಬಂದನೆನತ್ತಿವಂ ಕೆಲಕಿವಳ್ ಕಟ್ಟೋಪಳಿನ್ನಿರ್ದ್ದ್ರಪಳ್ | ವನಜಾಸಾರವುದೀತನಕ್ಷಿಯಿವಳಾ ಪೀಯೂಷಸೇಕಂ ಸ್ಮಿತಂ || ಅನಿಶಂ ಗಾಢವಿದೆಮ್ಮತೊಲ್ಮೆ ದವದಂತೀಷದ್ವಿಯೋಗಂ ಸುಡ | ಲ್ಕೆನಿಪೀ ನಾಶವಿಪಾಕಿಗಳ್ ತರುಣಿಮವ್ಯಾಧ್ಯುದ್ಭವೋಪದ್ರವಂ ||೭೯|| *

ದೇಪ—ಮಹಾರಾಜನೇ ? ಯೌವನವು ವ್ಯಾಧಿಯೆಂದರೆ, ಅದು ಹೇಗೆ ತಾನೇ ಹೊಂದುವುದು ?

ರಾಜ—ಕೇಳು,

ವೃ|| ಸುಡುವಾ ಕಾಮಮಹಾಜ್ವರಂ ಜನಯಿಕುಂ ವ್ಯಾಘೂರ್ಣಿಕುಂ ಕಣ್ಗಳಂ | ತೊಡೆಗಂಡಂ ಹೃದಯಂ ನಿತಂಬವಿವರಂ ಬಾವಂತದುಚ್ಛೂನಿಕುಂ || ಕಡುದುಃಖಂ ಗೆಳೆಯರ್ಗ್ಗದೀವ ಪಲವುಂ ಗೆಯ್ದುಂ ವಿಕಾರಂಗಳಂ | ಮಡಿಪಲ್ ಜವ್ವನಮಾತ್ಮಮಂ ರುಜೆ ದಿಟಂ ಕಾವೇಂ ಗ್ರಹಣ್ಯಾದಿಗಳ್ ||೮೦|| †

ಭಾನು—(ಸಂವರಣವನ್ನು ಅಭಿನಯಿಸಿ, ತೆರೆಯಕಡೆ ನೋಡಿ) ಎಲೌ ! ವಾಸಂತಿಕೆ, ಕುಮಾರನನ್ನು ಕರೆದುಕೊಂಡು ಬಾ, ಅವನನ್ನು ಮುಂದೆ ನಿಲ್ಲಿಸಿ, ಆರ್ಯಪುತ್ರನ ಮೋಹವನ್ನು ಹೋಗಲಾಡಿಸುವೆನು.

ರಾಜ—(ತನ್ನಲ್ಲಿ) ಇದೂಕೂಡ ದುಸ್ತರವಾದುದು, ಪ್ರಾಪ್ತವಾಗುವುದು.

(ಬಳಿಕ ಕುಮಾರನು ಪ್ರವೇಶಿಸಿ ತಾಯ ಬಳಿಯಲ್ಲಿ ನಿಲ್ಲುವನು).

---

* ಇದೋ ಈ ನನ್ನ ಪ್ರಿಯನು ಬಂದನು, ನನ್ನ ಪ್ರಿಯತಮೆಯಾದ ಇವಳು ಇದಿರಲ್ಲಿರುವಳು; ಇವನ ದೃಷ್ಟಿ ಕಮಲವರ್ಷವನ್ನು ವರ್ಷಿಸುವುದು, ಇವಳ ಮಂದಹಾಸವೂ ಅಮೃತವನ್ನು ಸೂಸುವುದು; ನಮ್ಮ ಇಬ್ಬರ ಪ್ರೇಮವು ದೃಢವಾದುದು, ಇಹದಲ್ಲಿ ಕಿಂಚಿದ್ವಿಯೋಗವಾದರೂ ದವಾಗ್ನಿಸದೃಶವಾಗುವುದು; ಇವೆಲ್ಲವೂ ವಿನಾಶದಲ್ಲಿ ನಮ್ಮನ್ನು ನಾಶಮಾಡುವ ತಾರುಣ್ಯರೋಗದ ಮಹೋಪದ್ರವಗಳು.

† ಕಾಮವೆಂಬ ಸಹಿಸುವುದಕ್ಕಾಗದ ಮಹಾಜ್ವರವನ್ನು ಹುಟ್ಟಿಸುವುದು; ಕಣ್ಣುಗಳು ಸುತ್ತುವಂತೆ ಮಾಡುವುವು; ತೊಡೆ, ಪಟ್ಟಡ, ಗಲ್ಲ, ಎದೆ—ಈ ಅವಯವಗಳೆಲ್ಲವೂ ಊದಿಬಾತುಕೊಳ್ಳುವಂತೆ ಮಾಡುವುದು; ಯಾವಯಾವ ದುರ್ವಿಕಾರಗಳನ್ನು ನೋಡಿ ಸುಹೃದರಾದವರು ಬಹುವಾಗಿ ವ್ಯಥೆಪಡುವರೋ ಆ ಆ ದುರ್ವಿಕಾರನ್ನು ಮಾಡುವುದು; ವ್ಯಾಧಿಯೆಂಬುದು ಆತ್ಮನಾಶದಲ್ಲಿ ನಿಯತವಾದ ವ್ಯಾಧಿ; ಆ ಗ್ರಹಣೀರೋಗ ಮೊದಲಾದುವು ಇನ್ನೇನು ?

ಭಾನು—(ಮಗುವನ್ನು ರಾಜನ ಮುಂದೆ ಎತ್ತಿಕೊಂಡು ನಿಂತು ಬಾಷ್ಪದೊಡನೆ ಉಪರೋಧಿಸುತ್ತ) ಆರ್ಯಪುತ್ರ, ಹಾಗಾದರೆ ಈ ಮಗುವನ್ನು ಇನ್ನು ಯಾರು ರಕ್ಷಿಸುವರು ?

ರಾಜ—(ವೈರಾಗ್ಯದಿಂದಲೂ, ಶೋಕದಿಂದಲೂ ವರ್ಣಗಳು ಚಿತ್ರಚಿತ್ರವಾಗಿ ಬರುತ್ತಿರಲು ತನ್ನಲ್ಲಿ)

ಕಂ|| ಪೆರವು ಗೆಲೆ ಭಾವತತಿಯೆ |
ಳ್ಚರದೆ ದಲತಿವಕ್ತೃವಂ ವಿವೇಕಮನಿಕ್ಕುರ್ಗಂ ||
ಬರೆ ತ್ರಾಣಮವರ್ಕೆ ಸುತನಿನೆ |
ನೆರೆದಪರಾರಾಂತರಂಗಳಂ ಜಯಿಸಲವಂ ||೮೧|| *

ದೇವ—(ನೋಡಿ, ಆನಂದದಿಂದ ಕೂಡಿದವನಂತೆ) ಮಹಾರಾಜನೇ, ಈ ವಿಷಯದಲ್ಲಿ ಪ್ರತಿವಚನವೇನು ?

ರಾಜ—ಪಾರಕ್ಯದ ರಕ್ಷಣೆಯಲ್ಲಿ ಭಾರವೆಲ್ಲಿಯದು ?

ವೃ|| ಜನಿಕುಂ ಜಂತುಗದೆಂತು ಪ್ರತ್ಯಯಮಿವಂ ಮಜ್ಜಾತನೆಂಬೊಂದು ತಾ | ನೆನಲಾತ್ಮಂ ಗಡ ಸಾಕ್ಷಿ ಭಿನ್ನಮದು ಮೆಯ್ ಮೆಯ್ಯಂ ಪರಂ ಪುಟ್ಟಿಕುಂ || ತನುತಾಳ್ದಿಂತುಟು ಭೂತಭವ್ಯನೆನಿಪಾತ್ಮಂ ಜನ್ಯನಿಂದಾದಪಂ | ಜನಕಂ ನಿತ್ಯನಿವೃತ್ತನೆಂತುಟಿವನಪ್ಪಂ ಮೇಣ್ ಶರೀರೇತರಂ ||೮೨|| †

ಒಂದುವೇಳೆ ಜನ್ಯಜನಕಭಾವವು ಆತ್ಮನಿಷ್ಠವೇ ಆಗಲಿ; ಆದರೂ,

ವೃ|| ದೈವಂ ನಿಚ್ಚಂ ಸಲಪುಗುಮೆನಲ್ ಲೋಕಮಂ ರಕ್ಷ್ಯಮಿನ್ನೇಂ | ದೈವಾರಕ್ಷ್ಯಂ ಲವಮಿರಲದಂ ವಸ್ತುವೇಸಾನುಮಾರ್ಗ್ಗಂ || ಆನಂ ಸತ್ತ್ರದ್ವಿಜ

* ವಿವೇಕವು ಎಷ್ಟೆಷ್ಟು ಜರಚುವುದಾದರೂ ಅದನ್ನು ಗೆಲ್ಲುವ ಬೇರೆಯ ಭಾವಗಳು ಜಾಗರೂಕಗಳಾಗಿ ಇದ್ದೇ ಇರುವುವು. ಇವುಗಳಿಗೆ ಪುತ್ರನಿಂದಲೇ ತ್ರಾಣವು ದೊರೆವುದಾದರೆ ಅಂತರಗಳಾದ ಇವುಗಳನ್ನು ಜಯಿಸಹೊರಡುವನು ಯಾರು ?

† ಇವನು ನನ್ನ ಸುತನು (ನನ್ನಿಂದ ಹುಟ್ಟಿದವನು) ಎಂಬ ಪ್ರತ್ಯಯವು [ನಂಬುಗೆ] ಜಂತುಗೆ [ಹುಟ್ಟಿಗೆ ಸಿಕ್ಕಿಕೊಂಡ ಪ್ರಾಣಿಗೆ] ಬರುವುದಲ್ಲವೇ. ಅದು ಆತ್ಮನು ಸಾಕ್ಷಿಯಾಗಿರಲು ಹೇಗೆ ಸಿದ್ಧವಾಗುವುದು ? ದೇಹದಿಂದ ದೇಹಾಂತರವು ಹುಟ್ಟಿತು-ಅಷ್ಟೆ, ಹಿಂದೆ ಕಳೆದುಹೋದ ಕಾಲದಲ್ಲೆಲ್ಲಾ ಇದ್ದು ಮುಂದೆ ಬರುವಕಾಲದಲ್ಲೆಲ್ಲಾ ಇರುವ ಆತ್ಮನು ಈಗ ಹೇಗೆ ಜನ್ಯ [ಉತ್ಪಾದ್ಯ] ನಾಗುವನು ? ಮತ್ತೆ ನಿತ್ಯನಿವೃತ್ತನಾಗಿ ದೇಹದಿಂದ ಭಿನ್ನನಾದ ಅದೇ ಆತ್ಮನು ಹೇಗೆ ಜನಕ [ಉತ್ಪಾದಕ] ನಾಗುವನು ?

ತನಯರಂ ಸಾರ್ಚಿದಂ ಜೀವಲೋಕ | ಕ್ಕೊಕೀವಲ್ ಸತ್ತ್ವಪ್ರಜದಪಿತೃವಂ ವಿಷ್ಣುವಂ ಬಿಟ್ಟೊಡಕ್ಕುಂ ||೮೩|| *

ದೇವ—(ಬಾಲಕನನ್ನು ನಿರ್ದೇಶಿಸಿ), ಹಾ ! ಈ ಕಂದನಿಗೆ ಕಷ್ಟವು ಬಂತು.

ವೃ|| ಕರೆದು ಗೃಹಾಂತದೊಳ್ ಸ್ಪಮರಿಪಾ ಸುಖಹಾರ್ದವಿತಾನಲೋಲನಂ | ಮೆರೆದು ಚಲಿಪ್ಪ ಚೋಲದೊಡನೆಯ್ದಿರೆ ಕುಳ್ಳಿರಿಸುತ್ತುಮಂಕದೊಳ್ || ಕರದೆ ಕುಡುತ್ತುಮೆತ್ತಿ ಶಿಶುಕೇಳಿಯ ಕೋಲಿನ ಸೆಂಡ ಕುಕ್ಕೆಯಂ | ಹರಿಸದಿನಿನ್ನದಾರೊರೆಸುಗುಂ ವಸನಾಂಚಲದಾಸ್ಯಧೂಳಿಯಂ ||೮೪|| †

ರಾಜ—(ತನ್ನಲ್ಲಿ) ಇಂತಹ ಲಲಿತವಿಷಯಗಳು ಅಂಕುಶಪ್ರಾಯವಾಗುವುದು. ಯಾರ ಹೃದಯಕ್ಕೆ ? (ಪ್ರಕಾಶವಾಗಿ) ಮಂತ್ರಿಯೇ ?

ಕಂ || ನೆರೆದೊಡಮೇಂ ಭಾವಮುಮಿಾ |
ಪರಿಯಾ ಕ್ಷಣಿಕಮದದಾವಿಲೀಭಾವಮುಮಂ ||
ತಿರೆ ನಿರ್ಮಲಮಾತ್ಮಂಗೇಂ |
ಕೊರೆತೆಯೆ ಫೂತ್ಕರದೆ ದರ್ಪಣಕ್ಕಂತಿರೆವೊಲ್ ||೮೫|| ‡

* ಪ್ರಪಂಚವು ನಿರಂತರವೂ ದೈವರಕ್ಷ್ಯವೆನಿಸುವ ಪಕ್ಷದಲ್ಲಿ ಇನ್ನು ರಕ್ಷ್ಯ [ರಕ್ಷಿಸಲ್ಪಡಬೇಕಾದುದು] ವೆಂಬುದೇ ಇಲ್ಲ; ದೈವದಿಂದ ರಕ್ಷಿಸಲ್ಪಡದ ವಸ್ತುವೇನಾದರೂ ಲೇಶವಾದರೂ ಇದ್ದರೆ ಅದನ್ನು ರಕ್ಷಿಸಲು ಸತ್ತುಹೋಗಿದ್ದ ಬ್ರಾಹ್ಮಣನ ಮಕ್ಕಳನ್ನು ಜೀವಲೋಕಕ್ಕೆ ತಂದವನೂ, ಸರ್ವಸತ್ತ್ವಗಳನ್ನೂ ರಕ್ಷಿಸುವನೂ ಆದ ವಿಷ್ಣುವನ್ನು ಬಿಟ್ಟರೆ ಇನ್ನು ಯಾರಿಂದ ಆಗುವುದು ?

† ವಿಧವಿಧದ ಸುಖದಿಂದಲೂ, ಸ್ನೇಹದಿಂದಲೂ, ಲೋಲನಾಗಿ ಒಳಗೆ ಓಡಾಡುತ್ತಿರುವವನನ್ನು ಕರೆದು ಅವನು ಚೋಲವನ್ನು ಓಲಾಡಿಸಿಕೊಂಡು ಹೊರಗೆ ಬರಲು ಬೇಗನೆ ಎತ್ತಿ ತೊಡೆಯಮೇಲೆ ಕುಳ್ಳಿರಿಸಿಕೊಂಡು ಆಟದ ಕೋಲುಗಳು, ಗೋಲಿಗಳು, ಇರುವ ಬುಟ್ಟಿಯನ್ನು ಕಯ್ಯಿಂದ ಎತ್ತಿಕೊಡುತ್ತ ಹರ್ಷಾವಿರ್ಭಾವವನ್ನು ಹೊಂದಿ ತನ್ನ ವಸ್ತ್ರದ ಸೆರಗಿಂದ ಅವನ ಮುಖದ ಕೊಳೆಯನ್ನು ಇನ್ನು ಯಾರು ಒರೆಸುವರು ?

ಟಿಪ್ಪಣಿ—'ಚೋಲ'ವೆಂದರೆ, ಮಕ್ಕಳಿಗೆ ಹಾಕುವ ಕಾಲವರೆಗೂ ಬರುವ ಒಂದು ಬಗೆಯ ಬಟ್ಟೆ. ನಮ್ಮ ಹಿಂದಿನವರು ಮಕ್ಕಳಿಗೆ 'ಕುಂಚಿಕೆ' ಮೊದಲಾದ ಬಟ್ಟೆಗಳನ್ನು ಹಾಕುತ್ತಿದ್ದರು; ಅವನ್ನು ನೋಡಿದ್ದವರಿಗೆ ಇದನ್ನು ಗ್ರಹಿಸುವುದು ಸುಲಭವು.

‡ ಮನಸ್ಸನ್ನು ಕದಡುವುದಾದರೂ ಕ್ಷಣಿಕವಾದ ಈ ವಿಧದ ಭಾವವು ಹುಟ್ಟಿದರೂ ನಿರ್ಮಲನಾದ ಆತ್ಮನಿಗೆ ಉಸಿರುಬಿಟ್ಟ ಕನ್ನಡಿಯಂತೆ ಏನುತಾನೇ ಆಗುವುದು ?

ಮತ್ತೆ,

ಕಂ || ಚ್ಯುತವಾಗೆ ನಶ್ವರಂ ಕ್ರಿಮಿ |
ಸತಿಯಾ ವ್ರಣದಿಂದೆ ರಕ್ತರೇತಃಕ್ಲೇದೋ ||
ದ್ಗತಮುದರೊಳ್ ಶ್ರದ್ಧೆಯನಾ |
ಹಿತವಾಗ್ಸ್ವರ್ಗದರಮುವರ್ಗ್ಗ ಪುತ್ರನೊಳುಂಟೇ ||೮೬|| †

ದೇವ—ಮಹಾರಾಜನೇ? ಸ್ವರ್ಗಸುಖವು ಪ್ರಧಾನವಾದುದರಿಂದ ಪುತ್ರರು ಅದಕ್ಕೆ ಹೇತುಭೂತರೆಂದು ದೊಡ್ಡವರು ಆದರಿಸುವರು.

ರಾಜ—ವೃ|| ಚಿರವಿಪ್ಪರ್ಂದದಚೀರ್ಣದುಃಖಮುದಯಂ ತಾನೊಂದು ನಾಶಧ್ರುವಂ | ಬರೆ ದೀರ್ಘಂ ಗಡದಿರ್ಪ್ಪೊಡಂ ವ್ಯಥಿಕುಮಾಶಂಕಾಸ್ಪದಂ ದುಃಖದಿಂ || ಒರೆಗುಂ ದುಃಖಹತಿಕ್ರಮಂ ವಿಧಿ ಹಹಾ ಸ್ವರ್ಗಾದಿ ತದ್ಗಮ್ಯಮೆಂ | ದರಿದರ್ ಸಕ್ತರದಕ್ಕೆನಲ್ ಸೊಗಕದಾಪನ್ಮಾರ್ಗಮೇಂ ವೆಗ್ಗಳಂ ||೮೭|| *

ಆದುದರಿಂದಲೇ ದುಃಖದುರ್ದಿನಗಳು ಬಹುವಾಗಿರುವುವೆಂದೂ ಸುಖಖದ್ಯೋತಿಕೆ ಅಲ್ಪವಾದುದೆಂದೂ ದೊಡ್ಡವರು ಆ ಆ ಸಾಮ್ಯವನ್ನು ಕೊಡುವರು ‡ ಮತ್ತೆ,

---

† ಸೂಚನೆ—ಈ ಶ್ಲೋಕಕ್ಕೆ ನಾವು ಬೇಕೆಂದು ಗದ್ಯಾನುವಾದವನ್ನು ಕೊಡುವುದಿಲ್ಲ ಅಲ್ಲಿ ಭಾವಗರ್ಭಿತವಾದ ಶಬ್ದಗಳು ಗಂಭೀರವಾಗಿಯೇ ಇರುವುವು; ಅವನ್ನು ಒಡೆದು ಹೇಳುವುದಕ್ಕೆ ಹೋದರೆ ಚೆನ್ನಾಗಿರುವುದಿಲ್ಲ.

* ದುಃಖಗಳು ಚಿರಕಾಲದಿಂದಲೂ ಸವೆಯದೆ ಏಕರೂಪವಾಗಿರಲು ನಾಶವಾಗುವುದೆಂದೇ ಸಿದ್ಧವಾದ ಉದಯವೇನಾದರೂ ಪ್ರಾಪ್ತವಾದರೆ ಅದು ದೀರ್ಘಕಾಲವೇ ನಿಲ್ಲುವುದಾದಲೂ ಯಾವಾಗ ಹೋಗಿಬಿಡುವುದೋ ಎಂಬ ಭಯದಿಂದ ದುಃಖವೇ ಹುಟ್ಟಿ ವ್ಯಥೆಯನ್ನೇ ಮಾಡುವುದು. ವಿಧಿಯಾದರೆ ದುಃಖಗಳು ನಾಶಹೊಂದಬೇಕೆಂದು ಹೇಳುವುದು. ಅಹಹ, ಅದರಿಂದ ಸ್ವರ್ಗಾದಿಸುಖವು ಗಮ್ಯವಾಗುವುದೆಂದು ದೊಡ್ಡವರು ತಿಳಿದು ಅಭಿರತರಾದರೆ ಇನ್ನು ಆಪನ್ಮಾರ್ಗವೇ ಏನು ಹೆಚ್ಚು ? [ಎಂದರೆ, ಏನು ಅಧಿಕತರವಾದ ಕಷ್ಟವನ್ನು ಕೊಡುವುದು]

ಟಿಪ್ಪಣಿ—ದುಃಖಗಳು ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ-ಎಂದು ತ್ರಿವಿಧವೆಂದೂ ಅವುಗಳ ಅತ್ಯಂತನಿವೃತ್ತಿಯೇ ಅತ್ಯಂತಪುರುಷಾರ್ಥ [ಮೋಕ್ಷ] ವೆಂದೂ ಸಾಂಖ್ಯಮತವು, ಸ್ವರ್ಗಾದಿಸುಖಗಳು ಅಂತಹ ಪರಮಪುರುಷಾರ್ಥವಲ್ಲವೆಂದೂ ದುಃಖಮಧ್ಯದಲ್ಲಿ ಬರುವ ನಶ್ವರಸುಖಗಳೆಂದೂ ಅವಕ್ಕೇ ಯತ್ನಿಸುವುದಕ್ಕೂ, ಆಪತ್ತಿನ ದಾರಿ ಹಿಡಿವುದಕ್ಕೂ ಏನೂ ಭೇದವಿದ್ದ ಹಾಗೆ ಕಾಣಲಿಲ್ಲವೆಂದೂ ಅಭಿಪ್ರಾಯವು.

‡ ಖದ್ಯೋತವೆಂದರೆ-ಮಿಂಚುಹುಳು; ಖದ್ಯೋತಿಕೆಯೆಂದರೆ-ಮಿಂಚುಹುಳು ಒಂದಾವೃತ್ತಿ ಹೊಳೆವುದಕ್ಕೆ ಹಿಡಿವ ಕಾಲವು ದುಃಖವಿರುವ ಕಾಲವನ್ನು ದುರ್ದಿನಕ್ಕೂ, ಸುಖವಿರುವ

ಕಂ|| ದೊರೆ ಬ್ರಹ್ಮಾನಂದಮಹಾ |
ಶರಧಿಯ ಬಿಂದುಗಳಿವೀ ಸುಖಂ ಸ್ವಃಪ್ರಮುಖಂ ||
ತೊರೆದದರೊಳಯ್ಯೊ ಕಾಂಕ್ಷೆಯ |
ನಿರಿಪೆನೆ ಈಕ್ಷುದ್ರವಸ್ತುವೋಳದನಿನಿಸುಂ ||೭೭|| *

ದೇವ—ಹಾ, ಕಷ್ಟವು, ರಾಜಾಶ್ರಿತಗಳಾದ ಸಂಪದಾದಿಗಳು ಇನ್ನು ಏನು ಆಗಬೇಕು ?

ರಾಜ—ವೃ|| ನರನೊಳ್ ಸೇರ್ಗೆವು ಸಂಪದಂಗಳೆನಸುಂ ಭೋಗೇಚ್ಛು ಬೇರೊರ್ವನೋ | ಅರಿಷಡ್ವರ್ಗಕೆ ತಾಣವಾಗದ ಗುಣವ್ರಾತಂಗಳೆನ್ನೊಳ್ ವಲಂ ||

(ಅಂಜಲಿಯನ್ನು ರಚಿಸಿ)

ಗುರುಗಳ್ ದೇವರಿಳಾಸುರರ್ ಕ್ಷಮಿಪುದಾಂ ಶ್ರೌತಂ ನಿದೇಶಂಗೊಳು | ತ್ತುರೆ ಸುಜ್ಞಾನಮದೆನ್ನನಿಂದು ಸೆಳೆಗುಂ ಸೇರಲ್ ಪರಬ್ರಹ್ಮನೊಳ್ ||೭೮|| †

ದೇವ--ಮಹಾರಾಜನೇ ? ಹೀಗೆ ಸರ್ವಸ್ವವನ್ನೂ ಪರಿತ್ಯಜಿಸಿದ ನಿನಗೆ ಶರೀರಭರಣವೂ ದುರ್ಘಟವಾಗುವುದಲ್ಲವೇ ?

---

ಕಾಲವನ್ನು ಖದ್ಯೋತಿಕೆಗೂ ಸಮವಾಗಿ ಭಾವಿಸುವುದರಿಂದ ಅದು ದೀರ್ಘಕಾಲವಿರುವುದೆಂದೂ ಅದು ಅತ್ಯಲ್ಪಕಾಲವಿರುವುದೆಂದೂ ಹೇಳಿದ ಹಾಗಾಯಿತು

* ಈ ಸ್ವರ್ಗಾದಿಸುಖಗಳು ಬ್ರಹ್ಮಾನಂದವೆಂಬ ಮಹಾಸಮುದ್ರದ ಹನಿಗಳು. ಅದನ್ನು ಬಿಟ್ಟು ಏನು, ಈ ಕ್ಷುದ್ರವಾದುದಕ್ಕೆ ಅಪೇಕ್ಷೆಪಡುವೆನೆ?

† ಈ ಸಂಪತ್ತುಗಳೆಲ್ಲವೂ ಭೋಗೋನ್ಮುಖನಾದ ಮತ್ತೆ ಯಾವ ಪುರುಷನನ್ನಾದರೂ ಉಪಾಶ್ರಯಮಾಡಲಿ, ಇವನ್ನು ಪರಿತ್ಯಜಿಸುವ ನನ್ನನ್ನಾದರೆ ಕಾಮಕ್ರೋಧಮದಾದಿಗಳಿಗೆ ಸ್ಥಾನವಾಗದ ಗುಣಗಳು ಅಧಿಕವಾಗಿ ಸೇರಲಿ.

ಗುರುಗಳೂ, ದೈವತವೂ, ದ್ವಿಜಗುಣವೂ, ನನ್ನನ್ನು ಕ್ಷಮಿಸತಕ್ಕುದು [ಎಂದರೆ ನಾನು ಅವರ ಮಾತನ್ನು ಕೇಳುವುದಿಲ್ಲವೆಂದು ಕೋಪಿಸಕೂಡದೆಂದರ್ಥವು]. ಶ್ರೌತನಿದೇಶದಿಂದ [ಎಂದರೆ, ಶ್ರುತ್ಯುಕ್ತವಾದ ಉಪದೇಶದಿಂದ-ಆಜ್ಞೆಯಿಂದ] ಸುಜ್ಞಾನವು ನನ್ನನ್ನು ಅತಿನಿರ್ದಯವಾಗಿ ಆಕರ್ಷಿಸುತ್ತ ಪರಬ್ರಹ್ಮನಲ್ಲಿ ಸೇರಿಸಲು ತೆಗೆದುಕೊಂಡು ಹೋಗುತ್ತಿರುವುದು [ಎಂದರೆ, ನನಗೆ ಈಗ ಯಾವಸಂಕಲ್ಪವೂ ಇಲ್ಲವೆಂದು ಭಾವವು]

ರಾಜ—ವೃ|| ನೆಲೆ ವಾಸಿಪ್ಪೊಡೆ ಪೆರ್ನೆಳಲ್ ಗಿಡುಗಳಾ ಮೆಲ್ಪಾಸು ಕಂಥಾಭರಂ | ಪಲವುಂ ಗೇಹದ ವಿಷ್ಟಭಿಕ್ಷೆಯುಣಿಸಾ ದೇಶಾಟನಂ ಛಂದದಿಂ || ಒಲವೆಂತಶ್ರಮಸಂಚರಂ ರುಚಿವಶಂ ಶೀತಾತಪೋಪಾಸನಂ | ಸುಲಭಂ ಶಾಂತಿಯಿನೆಂತು ದೇಹಕೆ ಸೊಗಂ ಗೇಹಸ್ಥಿತಂಗಪ್ಪುದೇಂ ||೯೦|| *

ಮತ್ತೆ ಈ ಭರಣಾಯಾಸವನ್ನು ತಾನೇ ಏಕೆ ಹತ್ತಿಸಿಕೊಳ್ಳಬೇಕು ? ನೋಡು,

ವೃ|| ಎನಿಕುಂ ಕಾಲದ ಸೂಕ್ಷ್ಮಮಾಯು ಕಣಿಕಂ ವೇಗಾಧಿಕಸ್ರೋತದೊಳ್ | ತನು ಸಂಬಂಧಿಯದರ್ಕ್ಕದಾಹಹ ಗತಪ್ರಾಯಂ ಗಡಾ ಕಾಣ್ಬಗುಂ|| ತನುಕಂ ಕಾಲಮಿದಿರ್ಪ್ಪೊಡಿರ್ಕ್ಕೆ ತುರಿಪಂ ತಾಂ ಪೋಪ್ಪೊಡಂ ಪೋಕೆ ಮೇ | ಣೆನಗಾ ಸ್ವಾತ್ಮಮದೊಂದೆ ಗಾಢಸುಖದಾಶ್ಲೇಷಂ ಸ್ಫುರಿಕ್ಕೇಗಳುಂ ||೮೧|| †

ಆದರೂ,

ವೃ|| ಪರಿಪಾಲ್ಯಮಾಗೆಮಗದಾಜ್ಞೆಯಿದೇ ಬಿಡಲ್ಕಾ | ವರುಹರ್ ಹ ರಾಜ್ಯಮುಖಭೋಗವಿತಾನದಿಂದಂ || ಪರಿವಂಚಿಕುಂ ಬಿಡದೆ ತಮ್ಮನೆ ಇಪ್ಪೊಡೆಮ್ಮಂ | ಪರಿಯಿಂತೆನಲ್ಕವರ್ಕಿದೆಮ್ಮಿನೆ ಎಂತು ಯುಕ್ತಂ ||೯೨|| ‡

---

* ಸ್ವಚ್ಛಂದದಿಂದ ತಿರುಗುವುದು; ಪರಗೃಹಗಳಿಂದ ನಾನಾರಸಾನ್ನವನ್ನು [illegible]ರಿತಂದು ತಿನ್ನುವುದು; ಕಂತೆಯೇ ಮೃದುವಾದ ಹಾಸುಗೆ; ಮರಗಳ ದಟ್ಟವಾದ ನೆಳಲಲ್ಲಿ ವಾಸಮಾಡುವುದು; ಶ್ರಮವಿಲ್ಲದೆ ಸುಖಸಂಚಾರಮಾಡುವುದು; ಬೇಕಾದಾಗ ಶೀತವನ್ನೂ, ಬಿಸಲನ್ನೂ, ಸೇವಿಸುವುದು;—ಶಾಂತಿಸುಲಭವಾದ ಈ ದೇಹದ ಸುಖಗಳು ಮನೆಯಲ್ಲೇ ಇದ್ದವನಿಗೆ ಬರುವುದೇ ? [ಗೃಹಸ್ಥನೇ ಆಗಿದ್ದವನಿಗೆ ಬರುವುದೇ, ಎಂದರ್ಥವು].

† ಮಹಾವೇಗದಿಂದ ಚಲಿಸುತ್ತಿರುವ ಕಾಲಪ್ರವಾಹದಲ್ಲಿ ಆಯುಸ್ಸೆಂಬುದು ಎಲ್ಲಿಯೋ ಒಂದು ಹನಿ; ಈ ದೇಹವು ತತ್ಸಂಬಂಧವಾದದು, ಅದೂ ಆಗಲೇ ಗತಪ್ರಾಯವಾಗಿ ನನಗೆ ಕಾಣುವುದು; ಅದೇನಾದರೂ ಸ್ವಲ್ಪಕಾಲವಿರುವುದೇ ಇರಲಿ, ಹೋಗುವುದೇ ಸಾಕು ಹೋಗಲಿ; ನಮಗಾದರೆ ಈ ನಿರ್ಭರಸುಖಾಶ್ಲೇಷನಾದ ಸ್ವಾತ್ಮನೊಬ್ಬನು ಸ್ಫುರಿಸುತ್ತಿರಲಿ.

‡ ಹಾ, ನಾವು ಅದೇ ಈ (ಶ್ರುತಿಶಿರಸ್ಸಿದ್ಧವಾದ) ಆಜ್ಞೆಯನ್ನು ಪರಿಪಾಲಿಸುವೆವಾದರೆ ಈ ರಾಜ್ಯಾದಿಭೋಗಗಳು ತಾವೇ ನಮ್ಮನ್ನು ಬಿಟ್ಟು ಹೋಗಬೇಕು. ಹಾಗೆ ಅವು ಹೋಗದಿದ್ದ ಪಕ್ಷದಲ್ಲಿ ತಮ್ಮನ್ನು ತಾವೇ ವಂಚಿಸಿಕೊಳ್ಳುವೆವು. ಹೀಗಿರಲು ಅವಕ್ಕೆ ನಮ್ಮಿಂದಲೇ ವಂಚನೆಯೇಕೆ ಆಗಬೇಕು.

ಯಾವುದಕ್ಕೆ ನಮಗೆ ಅಭಿನಿವೇಶವಾಗುವುದೋ* ಅದನ್ನಾದರೂ ಗಮನಿಸ್ಸಿನೊಡು,

ವೃ|| ಇದು ಚಿತ್ರಂ ದಲರಂಗವೃತ್ತಿ ಬರೆಪಂ ನಿರ್ಭಿತ್ತಿಕಂ ಚಿತ್ರದಾ |
ಯಿದು ಸಂಕಲ್ಪವಿಕಲ್ಪಸೋಕ್ಷಮೆ ಜಗಂ ಚಿದ್ವ್ಯೋಮಪಟ್ಟಾಂಕಿತಂ || ಇದು
ದೀರ್ಘಂ ಕನಸೆಂದು ಪ್ರಾಜ್ಞರೊರೆವರ್ ತಾನಿಂದ್ರಜಾಲಂ ಗಡೆಂ | ದಿದು
ಪೇಳ್ವರ್ ಕೆಲರಂತಿದಾಗಸವೊಳಲ್ತಾನೆಂಬರನ್ಯರ್ ಬುಧರ್ ||೯೩|| †

ಗೋರಕ್ಷ—(ರಾಜನಿಗೆ ಕಾಣದಂತೆ ತಾನು ಮರೆಯಾಗಿ ಎಲ್ಲವನ್ನೂ ಕೇಳುತ್ತಿದ್ದ ಸ್ಥಳದಿಂದ ಮುಂದಕ್ಕೆ ಬಂದು) ಸಾಧು; ವತ್ಸ, ಸಾಧು ! ನಿರ್ವಾಣಶಾಲಿಗಳಾದ ಎಲ್ಲಾ ಜೀವಗಳನ್ನೂ ಅತಿಶಯಿಸಿ ವರ್ತಿಸುತ್ತಿರುವೆ. ಎಲೈ ಮಂತ್ರಿಯೇ, ಅನಿವರ್ತನೀಯನಾದ ಇವನನ್ನು ನಿವರ್ತಿಸುವುದಕ್ಕೆ ಮಾಡಿದ ಯತ್ನವು ಸಾಕು. ಈ ರಾಜಕುಮಾರನು ರಾಜ್ಯದಲ್ಲಿ ಅಭಿಷಿಕ್ತನಾಗಲಿ, ನಾನೂ ಈ ರಾಜನೊಡನೆ ಅವನ ರಕ್ಷಾಪಕ್ಷಪಾತಿಯಾಗಿರುವೆನು

ದೇವ—(ನಿಟ್ಟುಸಿರು ಬಿಟ್ಟು) ಪೂಜ್ಯರ ಅಪ್ಪಣೆ.

(ಭಾನುಮತಿ ಶೋಕವಿಕಲೆಯಾಗಿ ವಿಲಾಪಿಸುವಳು).

ಗೋರ—ದೇವಿಯೇ ! ಅಮೃತೀಕರಣಸಮಯದಲ್ಲಿ ನಿನಗೆ ಮತ್ತೆ ಸ್ವಾಮಿಯ ಸಮಾಗಮವು ಲಭಿಸುವುದು. (ರಾಜನನ್ನುದ್ದೇಶಿಸಿ) ರಾಜನೇ, ನಿನಗೆ ಪ್ರಿಯವಾದ ಉಪಕಾರವನ್ನಿನ್ನೇನು ಮಾಡಲಿ ?

ರಾಜ—ಪೂಜ್ಯರೇ, ಇದರ ಮೇಲೆಯೂ ಇನ್ನೇನು ಪ್ರಿಯವಿರುವುದು ?

ಗೋರ—ಆದರೂ ಈ ಭರತವಾಕ್ಯವು ನೆರವೇರಲಿ.

---

* ಅಭಿನಿವೇಶವೆಂಬರೆ ಪ್ರಾಪಂಚಿಕ ಸ್ಥಿತಿಗಳಿಗೂ ದೇಹೋಪಭೋಗಗಳಿಗೂ ಸ್ವಾಭಾವಿಕವಾಗಿ ಅಂಟಿಕೊಂಡು ವ್ಯಾಪ್ತಿ ಸಂಭವಿಸಿ ಅದನ್ನಲ್ಲಿ ವಿಚ್ಛೇದಿಸುವದೋ ಎಂಬ ಅಜ್ಞಾನವಿಶೇಷವು ಇದು ಯೋಗಶಾಸ್ತ್ರಸಿದ್ಧವಾದ ಪಂಚಕ್ಲೇಶಗಳಲ್ಲಿ ಒಂದು.

† ಇದು ರಂಗವಿಲ್ಲದೆ ನಿರೂಪಿಸಿದ ಚಿತ್ರವು; ಇದು ಗೋಡೆಇಲ್ಲದೆ ಕಿಲ್ಪಿ ಬರೆದ ಚಿತ್ರವು; ಸಂಕಲ್ಪವೆಂಬುದು ಬೇಕುಬೇಕಾದಹಾಗೆ ಕಲ್ಪಿಸುತ್ತಿರಲು ಮನಸ್ಸೆಂಬ ಆಕಾಶಪಟದ ಮೇಲೆ ವಿರಚಿತವಾದುದು,- ಇದೇ ಜಗತ್ತು, ಇದನ್ನು ವಿದ್ವಾಂಸರು ದೀರ್ಘಸ್ವಪ್ನವೆನ್ನುವರು, ಇನ್ನು ಕೆಲವರು ಇಂದ್ರಜಾಲವೆನ್ನುವರು. ಇನ್ನು ಕೆಲವರು ಅಂತರಿಕ್ಷನಗರಿಯೆಂದೇ ಭಾವಿಸುವರು.

ವೃ|| ಫಲಿಕಾ ಸಾಧುವ ಕಜ್ಜಮೃದ್ಧಿಕೆ ಚಿರಂ ರಾಜಂ ಪ್ರಜಾರಂಜಕಂ | ನೆಲಸಿಕ್ಕರ್ಕ್ಷತಪಕ್ಷಪಾತಮಧುರಂ ಸಂಪತ್ತುದಾರಾತ್ಮರೊಳ್ || ತೊಲಗಲ್ತ್ವದ್‌ಜ್ಞೆ ಬರಲ್ ಸುಹೃದ್ಗಣಮದರ್ಕ್ಕೆತ್ತಾ ಸದರ್ಥಂಗಳಂ | ನೆಲನೊಳ್ ದೃಷ್ಟಗುಣಂ ಸುಹಾರಿಹರಿ ವಾಕ್ಯಂ ಗೌರವಂ ಕೊಳ್ಗದಂ ||೯೪|| *

(ಎಂದೆಲ್ಲರೂ ನಿಷ್ಕ್ರಮಿಸುವರು).

ಇಂತು ಪಂಚಮಾಂಕಂ

ಸಮಾಪ್ತಂ ಗ್ರಂಥಮುಂ.

" ಭದ್ರಂ ಭೂಯಾತ್ "



* ಸಾಧುವಕಾರ್ಯವು ಸಿದ್ಧಿಸಲಿ, ರಾಜನು ಪ್ರಜಾರಂಜನೆಮಾಡುತ್ತ ಚಿರಕಾಲವು ವೃದ್ಧಿಸಲಿ, ಉದಾರಾತ್ಮರಾದವರಿಗೆ ಅಕ್ಷತವಾಗಿಯೂ ಪಕ್ಷಪಾತರಹಿತವಾಗಿಯೂ ಮಧುರವಾದ ಸಂಪತ್ತು ಉಂಟಾಗಲಿ, ತ್ವತ್ ಎಂಬ ಜ್ಞಾನವು(ನೀನು ಎಂಬ ಭಾವನೆ) ಹೋಗಿ (ಎಂದರೆ, [illegible] ಆಗವೆಂದರ್ಥವು) ಬಳಿಕ ಸುಹೃದ್ಗಣವುಬರಲು ಅವರಿಂದ [illegible] ವಾಕ್ಯ] ಇಹಲೋಕದಲ್ಲಿ ಪರೀಕ್ಷಿತಗುಣವುಳ್ಳುದಾಗಿ ಸದ [illegible] ನ್ನು ಕೊಳ್ಳಲಿ.

